■ ಡಾ. ಜಿ. ಕೃಷ್ಣಪ್ಪ,
■ ಡಾ. ಟಿ.ಎನ್. ವಾಸುದೇವಮೂರ್ತಿ

ಅಂಬಿಕಾತನಯದತ್ತರ

# ಕನ್ನಡ ಮೇಘದೂತ

## ಒಂದು ಸಹಪಯಣ



ಅಂಬಿಕಾತನಯದತ್ತರ

# ಕನ್ನಡ ಮೇಘದೂತ

## ಒಂದು ಸಹಪಯಣ

ಲೇಖಕರು

ಡಾ. ಜಿ. ಕೃಷ್ಣಪ್ಪ

ಡಾ. ಟಿ.ಎನ್. ವಾಸುದೇವಮೂರ್ತಿ




**ವಂಶಿ ಪಬ್ಲಿಕೇಷನ್ಸ್**

ನೆಲಮಂಗಲ, ಬೆಂಗಳೂರು

# Ambikaatanayadattara Kannada Meghadoota

**Ondu Sahapayana**

*by*

**Dr. G. Krishnappa**
**Dr. T. N. Vasudevamurthy**

*Published by*
**Vamshi Publications**
Gayathri Complex,
Near T.B. Bus Stand, B.H. Road,
Nelamangala, Bengaluru-562123
Mob: 9916595916
vamshipublications@gmail.com

© Authors

First Edition: 2021
Pages: iv+124= 128
Price: Rs. 130/-
Copies: 1000, Size: 1/8 Demmy
Used Paper: 70 GSM NS Maplitho
ISBN : 978-93-91775-04-9
Cover Page: Santhosh Sashi Hithlu
Inner layout: H K Sharath

Printed at



LAKSHMI MUDRANALAYA
ISO 9001-2000
Chamarajpet, Bengaluru-18
Ph: 080-26613123

## ಪರಿವಿಡಿ

# ಪ್ರಸ್ತಾವನೆ

## "ಮೇಘದೊಂದು ನೆವಮಾಡಿ ಹಾಡಿದನು ಯಕ್ಷಮಾಯೆಯಿಂದ"

'ಪ್ರಕೃತಿ', 'ಪುರುಷ' ಮತ್ತು ಅವೆರಡರ ಮಿಲನಕ್ಕೆ ಕಾರಣವಾಗುವ 'ಪ್ರೇಮ' – ಈ ಮೂರು ಕನ್ನಡ ಮೇಘದೂತದ ಪ್ರಧಾನ ವಸ್ತುಗಳಾಗಿವೆ. ಈ ಮೂರು ವಸ್ತುಗಳನ್ನು ಅನನ್ಯ ರೀತಿಯಲ್ಲಿ ಹದಗೊಳಿಸುವುದರ ಜೊತೆಗೆ ನಾಲ್ಕನೆಯದೊಂದು ವಸ್ತುವಿನತ್ತ ಓದುಗನನ್ನು ಸೆಳೆಯುವಲ್ಲಿ ಬೇಂದ್ರೆಯವರ 'ಕನ್ನಡ ಮೇಘದೂತ'ದ ವಿಶೇಷತೆ ಇದೆ. ಆ ನಾಲ್ಕನೆಯ (ತುರೀಯ) ವಸ್ತುವನ್ನು ಉಪನಿಷತ್ತುಗಳು 'ಬ್ರಹ್ಮವಸ್ತು', 'ಪರಮಜ್ಞಾನ' ಎಂದೆಲ್ಲ ಕರೆಯುತ್ತವೆ. ಕಾಳಿದಾಸನ ಒಂದು ಭವ್ಯವಾದ ಲೌಕಿಕ ಕಾವ್ಯ ಬೇಂದ್ರೆ ಪ್ರತಿಭೆಯಿಂದಾಗಿ ದಿವ್ಯವಾದ ಅಲೌಕಿಕ ಕಾವ್ಯವಾಗಿ ಪರಿಣಮಿಸಿದೆ.

ಕಾಳಿದಾಸನ ಮೇಘದೂತ ಶಾಪಗ್ರಸ್ತನಾದ ಒಬ್ಬ ಯಕ್ಷ ತನ್ನ ಮಡದಿಯಿಂದ ದೂರವಾಗಿ ಅವಳ ನೆನಪನ್ನು ನಿವೇದಿಸಿಕೊಳ್ಳುವ ಮತ್ತು ಮೇಘದ ಮೂಲಕ ಅವಳಿಗೆ ಸಂದೇಶವನ್ನು ಕಳುಹಿಸುವ ಒಂದು ಶೃಂಗಾರ ಕಾವ್ಯವಾಗಿದೆ. ಈ ಪ್ರಸಂಗವನ್ನು ತಮ್ಮ 'ಕನ್ನಡ ಮೇಘದೂತ'ದಲ್ಲಿ ಒಂದು ರೂಪಕವನ್ನಾಗಿ ಬಳಸಿಕೊಳ್ಳುವ ಬೇಂದ್ರೆ ಇದಕ್ಕೊಂದು ಆಧ್ಯಾತ್ಮಿಕ ಆಯಾಮವನ್ನು ನೀಡಿದ್ದಾರೆ. ಪ್ರತಿಯೊಬ್ಬ ಮನುಷ್ಯನೂ ತನ್ನ ಅಂತರಂಗದ ಆನಂದದಿಂದ, ತನ್ನ ನಿಜಸ್ವರೂಪದಿಂದ ದೂರವಾಗಿ ದುಃಖಿಯಾಗಿದ್ದಾನೆ. ಯಕ್ಷ ತನ್ನ ಇನಿಯಳನ್ನು ಕೂಡಲು ಬಯಸುವಂತೆ ಪ್ರತಿಯೊಬ್ಬ ಮನುಷ್ಯನೂ ತನ್ನ ಅಂತರಾತ್ಮನಲ್ಲಿ, ತನ್ನ ನಿಜಸ್ವರೂಪದಲ್ಲಿ ಒಂದಾಗಲು ಹಾತೊರೆಯುತ್ತಿದ್ದಾನೆ. ಮನುಷ್ಯನಷ್ಟೇ ಅಲ್ಲ, ಸೃಷ್ಟಿಯಲ್ಲಿ ಸಕಲ ಚರಾಚರ ವಸ್ತುಗಳೂ, ಸಕಲ ಜೀವರಾಶಿಗಳೂ ಪರಮಾತ್ಮನಲ್ಲಿ ಒಂದಾಗಲು ಹಾತೊರೆಯುತ್ತಿವೆ ಎಂಬ ಧ್ವನಿ ಬೇಂದ್ರೆಯವರ 'ಕನ್ನಡ ಮೇಘದೂತ'ದಲ್ಲಿದೆ. ಈ ಹಿನ್ನೆಲೆಯಲ್ಲಿ 'ಕನ್ನಡ ಮೇಘದೂತ' ಕೇವಲ ಒಂದು ಅನುವಾದವಲ್ಲ, ಕಾಳಿದಾಸನ ಅನುಸೃಷ್ಟಿಯೂ ಅಲ್ಲ. ಇದು ಕನ್ನಡದ ನುಡಿಯಲ್ಲಿ ಕಾಳಿದಾಸನಿಗೆ ಮರುಜನ್ಮವನ್ನು ದಯಪಾಲಿಸುವ, ಹೊಸ ಧ್ವನಿಯನ್ನು ನೀಡುವ ಪ್ರಯತ್ನವಾಗಿದೆ.

ಕಾಳಿದಾಸ ಕಾಶ್ಮೀರ ಶೈವದರ್ಶನದ ಅನುಯಾಯಿ ಎನ್ನುವವರುಂಟು, ಅವನು ಕಾಳಿಯ ಆರಾಧಕನಾದ್ದರಿಂದ ಅವನು ಶಾಕ್ತಪಂಥದ ಅನುಯಾಯಿಯಾಗಿದ್ದ ಎಂದು ವಾದಿಸುವವರುಂಟು. ಕನ್ನಡ ಮೇಘದೂತದಲ್ಲಿ ಬೇಂದ್ರೆ ಆ ಎರಡೂ ದರ್ಶನಗಳ

ಒಳನೋಟಗಳನ್ನು ಸಮನ್ವಯಿಸಿದ್ದಾರೆ. ಸಿದ್ಧಯೋಗಿ ಸಂಪ್ರದಾಯ ಪ್ರತಿಪಾದಿಸುವ 'ಶಿವಶಕ್ತಿ ಸಂಪುಟ'ದ ಹಿನ್ನೆಲೆಯಲ್ಲಿ ಅವರು ಮೇಘದೂತವನ್ನು ವ್ಯಾಖ್ಯಾನಿಸಿದ್ದಾರೆ. ಬೇಂದ್ರೆ ಒಮ್ಮೆ ಬೆಂಗಳೂರಿನ ಸಾಹಿತ್ಯಾಸಕ್ತರೊಂದಿಗೆ ಮಾತನಾಡುತ್ತ "ನನಗೆ ಸಿದ್ಧಶಿಲೆಯ ಮೇಲೆ ಹೋಗಿ ಕೂರಲು ಆಸಕ್ತಿಯಿಲ್ಲ; ನಾನು ಸುಡುಗಾಡು ಸಿದ್ಧರ ಪರಂಪರೆಯವನು" ಎಂದಿದ್ದರಂತೆ (ಕಿರಂ ನೆನಪು, ಪುಟ 65). ಆ ಪರಂಪರೆಯ ಪ್ರಭಾವ 'ಕನ್ನಡ ಮೇಘದೂತ'ದಲ್ಲಿ ಕಾಣಿಸುತ್ತದೆ. ಆದರೆ ಒಂದು ವ್ಯತ್ಯಾಸವಿದೆ. ಸಿದ್ಧಯೋಗಿ ಸಂಪ್ರದಾಯದ ಪ್ರಕಾರ ಶಿವನ ಲೌಕಿಕ ಅಭಿವ್ಯಕ್ತಿಯಾದ ಶಕ್ತಿಯು ಶಿವನಲ್ಲಿ ಐಕ್ಯವಾಗಲು ಹಂಬಲಿಸುತ್ತಾಳೆ. ಅಂದರೆ ಸಿದ್ಧಯೋಗಿ ಸಂಪ್ರದಾಯದಲ್ಲಿ ಸ್ತ್ರೀ ತತ್ವ ಪುರುಷ ತತ್ವಕ್ಕಾಗಿ ಕಾತರಿಸುತ್ತದೆ. ಆದರೆ ಇಲ್ಲಿ ಅದಕ್ಕೆ ವ್ಯತಿರಿಕ್ತವಾಗಿ ಪುರುಷ ತತ್ವವನ್ನು ಸಂಕೇತಿಸುವ ಯಕ್ಷನೇ ತನ್ನ ಮಡದಿಗಾಗಿ ಹಾತೊರೆಯುತ್ತಾನೆ. ಇದಕ್ಕೆ ಬೇಂದ್ರೆಯವರ ಸಾಧಕ ಪ್ರಜ್ಞೆಯೇ ಕಾರಣವೆನ್ನಬಹುದು.

**ಕಾಳಿದಾಸ**

ಕಾಳಿದಾಸನ ಬಗ್ಗೆ ಹೆಚ್ಚಿನ ಮಾಹಿತಿಗಳು ಲಭ್ಯವಿಲ್ಲ. ಆ ಹೆಸರು ಅವನ ಕಾವ್ಯನಾಮವೇ ಅಥವಾ ನಿಜ ನಾಮಧೇಯವೇ ಎಂಬ ಬಗ್ಗೆಯೂ ಸ್ಪಷ್ಟತೆ ಇಲ್ಲ. ಆತ ಒಬ್ಬ ನಿರಕ್ಷರ ಕುಕ್ಷಿಯಾಗಿದ್ದು ಕಾಳಿಯ ದಯೆಯಿಂದ ಪ್ರತಿಭಾಶಾಲಿಯಾದ ಎಂಬ ಜನಪ್ರಿಯ ಐತಿಹ್ಯ ಎಲ್ಲೆಡೆ ಪ್ರಚಾರವಾಗಿದೆ. ಕಾಳಿದಾಸ ಇತರ ಕವಿಗಳಂತೆ ತನ್ನ ಬಗ್ಗೆ ತನ್ನ ಕೃತಿಗಳಲ್ಲಿ ಏನನ್ನೂ ಹೇಳಿಕೊಂಡಿಲ್ಲ. ಅವನ ನಂತರದ ಕವಿಗಳು ಅವನನ್ನು ಸ್ಮರಿಸಿ ಹೊಗಳುವರಾದರೂ ಅವನ ಜೀವಿತದ ಬಗ್ಗೆ ಯಾವುದೇ ಮಾಹಿತಿಯನ್ನು ನೀಡುವುದಿಲ್ಲ. ಅವನ ಕಾವ್ಯದಲ್ಲಿ ಬರುವ ವಿವರ-ವರ್ಣನೆಗಳನ್ನು ಆಧರಿಸಿ ವಿದ್ವಾಂಸರುಗಳು ಒಂದಷ್ಟು ಊಹೆಗಳನ್ನು ಮಾಡಿದ್ದಾರೆ.

ಅವನ ಬಹುತೇಕ ಕಾವ್ಯಗಳಲ್ಲಿ ಉಜ್ಜಯಿನಿಯ ವಿಶೇಷ ವರ್ಣನೆ ಇರುವ ಕಾರಣ ಅವನು ಉಜ್ಜಯಿನಿಯ ಪ್ರಜೆ ಇರಬಹುದು ಎಂದು ಕೆಲವರು ಹೇಳುತ್ತಾರೆ. ರಾಜಸಭೆಯ ವರ್ಣನೆಗಳು ಪದೇ ಪದೇ ಬರುವುದರಿಂದ ಅವನು ಉಜ್ಜಯಿನಿಯ ವಿಕ್ರಮಾದಿತ್ಯನ ಆಸ್ಥಾನಕವಿ ಆಗಿದ್ದಿರಬಹುದು ಎಂದು ಕೆಲವರೆನ್ನುತ್ತಾರೆ. ಮೇಘದೂತ ಮತ್ತು ರಘುವಂಶದಲ್ಲಿ ಬರುವ ವಿವಿಧ ಸ್ಥಳನಾಮಗಳನ್ನು ಗಮನಿಸಿದರೆ ಅವನು ಭಾರತದಾದ್ಯಂತ ವ್ಯಾಪಕವಾಗಿ ಸಂಚರಿಸಿದ್ದನೆನ್ನಲು ಅವಕಾಶವಿದೆ. ಕುಮಾರ ಸಂಭವದಲ್ಲಿ ಬರುವ ಹಿಮಾಲಯದ ವರ್ಣನೆ ಅವನು ಹಿಮಾಲಯದ ಒಂದೊಂದು ಮೂಲೆಯನ್ನೂ ಪ್ರತ್ಯಕ್ಷವಾಗಿ ಕಂಡಿದ್ದನೇನೋ ಎನ್ನುವಂತಿದೆ. ಅವನ ಕಾವ್ಯದಲ್ಲಿ ನಿರೂಪಿತವಾಗಿರುವ ಪೂಜೆ, ಆಚರಣೆಗಳನ್ನು ವಿಶ್ಲೇಷಿಸುವ ವಿದ್ವಾಂಸರು ಆತ ಒಬ್ಬ ಶೈವ ಬ್ರಾಹ್ಮಣನಾಗಿದ್ದ ಎಂದು ಅಭಿಪ್ರಾಯ ಪಡುತ್ತಾರೆ. ಆದರೆ ಕಂದಾಚಾರದ ಬ್ರಾಹ್ಮಣನಾಗಿದ್ದ ಎನ್ನಲು

ಅವನ ಕಾವ್ಯ ನಾಟಕಗಳಲ್ಲಿ ಯಾವ ಆಧಾರವೂ ಸಿಗುವುದಿಲ್ಲ. ಅವನ ಕೃತಿಗಳನ್ನು ಅಧ್ಯಯನ ಮಾಡಿದರೆ ಅವನು ವೇದೋಪನಿಷತ್ತುಗಳಲ್ಲಿ ಅಗಾಧವಾದ ಜ್ಞಾನ ಸಂಪಾದಿಸಿದ್ದ, ಅಷ್ಟಾದಶ ಪುರಾಣಗಳನ್ನೂ ಕರತಲಾಮಲವಾಗಿಸಿಕೊಂಡಿದ್ದ ಎಂದು ಧಾರಾಳವಾಗಿ ಹೇಳಬಹುದು. ಒಟ್ಟಾರೆ, ಕಾಳಿದಾಸ ಒಬ್ಬ ಸಭ್ಯ, ಸುಸಂಸ್ಕೃತ, ಉದಾರವಾದೀ ಕವಿಯಾಗಿದ್ದ, ಮಹಾ ಪಂಡಿತನಾಗಿದ್ದ ಎನ್ನಬಹುದು.

ಕಾಳಿದಾಸನ ಕಾಲಘಟ್ಟದ ಬಗ್ಗೆಯೂ ವಿದ್ವಾಂಸರಲ್ಲಿ ಒಮ್ಮತವಿಲ್ಲ. ಅವನು ವಿಕ್ರಮಾದಿತ್ಯನ ಆಸ್ಥಾನದ 'ನವರತ್ನ'ಗಳೆಂದೇ ಖ್ಯಾತರಾದ ಕವಿಗಳ ಪೈಕಿ ಒಬ್ಬನಾಗಿದ್ದ ನೆಂದು ಪರಂಪರೆ ನಂಬುತ್ತದೆ . ಭಾರತದ ಪ್ರಾಚೀನ ಇತಿಹಾಸದಲ್ಲಿ 'ವಿಕ್ರಮಾದಿತ್ಯ' ಎಂಬ ಹೆಸರಿನ ಹಲವು ರಾಜರುಗಳು ಆಗಿ ಹೋಗಿದ್ದಾರೆ. ಕ್ರಿ.ಪೂ. 5ರಲ್ಲಿ ವಿಕ್ರಮಾದಿತ್ಯ ಎಂಬ ಹೆಸರಿನ ಒಬ್ಬ ರಾಜನಿಂದ ಸಂವತ್ ಶಕೆ ಪ್ರಾರಂಭವಾಗಿದ್ದು ಕಾಳಿದಾಸ ಅವನ ಸಮಕಾಲೀನನಾಗಿದ್ದ ಎಂದು ಸರ್ ಪೀಟರ್ಸನ್ ಎಂಬ ಪಾಶ್ಚಿಮಾತ್ಯ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

ಆದರೆ ಮತ್ತೆ ಕೆಲವು ವಿದ್ವಾಂಸರು ಕಾಳಿದಾಸ ಕ್ರಿಸ್ತಶಕೆಯ ನಂತರದ ಕಾಲಘಟ್ಟದವನು, ಗುಪ್ತರ ಕಾಲದವನು (ಕ್ರಿ.ಶ. 300–ಕ್ರಿ.ಶ. 650) ಎನ್ನುತ್ತಾರೆ. ಎರಡನೇ ಚಂದ್ರಗುಪ್ತ (ಕ್ರಿ.ಶ. 357–413), ಒಂದನೇ ಕುಮಾರಗುಪ್ತ (ಕ್ರಿ.ಶ. 413–455), ಮತ್ತು ಸ್ಕಂದಗುಪ್ತ (ಕ್ರಿ.ಶ. 455–480) – ಈ ಮೂರೂ ಸಾಮ್ರಾಟರ ಆಸ್ಥಾನಗಳಲ್ಲಿ ಕವಿಯಾಗಿದ್ದ ಎಂದು ವಿನ್ಸೆಂಟ್ ಸ್ಮಿತ್ ಹೇಳುತ್ತಾರೆ[1]. ಚಂದ್ರಗುಪ್ತ ಮತ್ತು ಸ್ಕಂದಗುಪ್ತರಿಗಿಬ್ಬರಿಗೂ 'ವಿಕ್ರಮಾದಿತ್ಯ' ಎಂಬ ಬಿರುದಿತ್ತು. ವಿಕ್ರಮಾದಿತ್ಯನೆಂಬ ಅರಸು ಕಾಳಿದಾಸನಿಗೆ ಆಶ್ರಯದಾತನಾಗಿದ್ದ ಎಂಬುದಂತೂ ನಿರ್ವಿವಾದ. ಆದರೆ ಯಾವ ಕಾಲದ, ಯಾವ ದೇಶದ, ಯಾವ ವಂಶದ ವಿಕ್ರಮಾದಿತ್ಯ ಎಂಬುದಿನ್ನೂ ಬಗೆಹರಿದಿಲ್ಲ.

**ಕಾಳಿದಾಸನ ಕೃತಿಗಳು**

ಕಾಳಿದಾಸನು ಮಾಲವಿಕಾಗ್ನಿಮಿತ್ರ, ವಿಕ್ರಮೋರ್ವಶೀಯ, ಶಾಕುಂತಲ ಎಂಬ ನಾಟಕಗಳನ್ನೂ, ಋತುಸಂಹಾರ, ಮೇಘದೂತ, ರಘುವಂಶ ಮತ್ತು ಕುಮಾರ ಸಂಭವವೆಂಬ ಕಾವ್ಯಗಳನ್ನೂ ಬರೆದಿದ್ದಾನೆ. ರಘುವಂಶದ 9ನೇ ಸರ್ಗದಿಂದ 17ನೇ ಸರ್ಗದವರೆಗಿನ ಭಾಗಗಳು ಮತ್ತು ಋತುಸಂಹಾರ ಕಾಳಿದಾಸ ಕೃತವಲ್ಲ ಎಂಬ ಅಭಿಪ್ರಾಯವಿದೆ. ಕಾಶ್ಮೀರಿ ಕವಿ, ಮೀಮಾಂಸಕಾರನಾದ ಕ್ಷೇಮೇಂದ್ರ ತನ್ನ ಕೃತಿಯಲ್ಲಿ 'ಕುಂತೇಶ್ವರದೌತ್ಯ' ಎಂಬ ಕಾವ್ಯದ ಕೆಲವು ಸಾಲುಗಳನ್ನು ಉದ್ಧರಿಸಿ, ಇದು ಕಾಳಿದಾಸ ವಿರಚಿತ ಕಾವ್ಯವಾಗಿದೆ ಎನ್ನುತ್ತಾನೆ. ಆದರೆ ಈ ಹೆಸರಿನ ಯಾವ ಕಾವ್ಯವೂ ಈವರೆಗೆ ನಮಗೆ ಲಭಿಸಿಲ್ಲ.

---

[1] ಅರ್ಲಿ ಹಿಸ್ಟರಿ ಆಫ್ ಇಂಡಿಯಾ, 1914

ಮೇಲೆ ತಿಳಿಸಲಾದ ಕಾವ್ಯ ನಾಟಕಗಳಲ್ಲದೇ ಕಾಳಿದಾಸನದ್ದೆಂದು ಹೇಳಲಾಗುವ ಕೃತಿಗಳ ಪಟ್ಟಿ ಹೀಗಿದೆ: ಅಂಬಾಸ್ತವ, ಕಲ್ಯಾಣಸ್ತವ, ಕಾಲೀಸ್ತೋತ್ರ, ಕಾವ್ಯನಾಟಕಾಲಂಕಾರ, ಗಂಗಾಷ್ಟಕ, ಘಟಕರ್ಪರ, ಚಂಡಿಕಾದಂಡಕ ಸ್ತೋತ್ರ, ಚರ್ಚಾಸ್ತವ, ಜ್ಯೋತಿರ್ವಿದಾಭರಣ, ದುರ್ಘಟಕಾವ್ಯ, ನಲೋದಯ, ನವರತ್ನ ಮಾಲಾ, ಪುಷ್ಪಬಾಣ ವಿಲಾಸ, ಮಕರಂದ ಸ್ತವ, ಮಂಗಳಾಷ್ಟಕ, ಮಹಾಪದ್ಮ ಷಟ್ಕ, ರತ್ನಕೋಶ, ರಾಕ್ಷಸಕಾವ್ಯ, ಲಕ್ಷ್ಮೀಸ್ತವ, ಲಘುಸ್ತವ, ವಿದ್ವದ್ವಿನೋದ ಕಾವ್ಯ, ವೃಂದಾವನ ಕಾವ್ಯ, ವೈದ್ಯಮನೋರಮಾ, ಶುದ್ಧಿಚಂದ್ರಿಕಾ, ಶೃಂಗಾರ ತಿಲಕ, ಶೃಂಗಾರರಸಾಷ್ಟಕ, ಶೃಂಗಾರ ಸಾರಕಾವ್ಯ, ಶ್ಯಾಮಲಾದಂಡಕ, ಶ್ರುತಬೋಧ, ಸಪ್ತಶ್ಲೋಕೀ ರಾಮಾಯಣ, ಸೇತುಬಂಧ.

ಇವೆಲ್ಲವನ್ನೂ ಕಾಳಿದಾಸನೇ ಬರೆದನೆಂಬ ಬಗ್ಗೆ ವಿದ್ವಾಂಸರಲ್ಲಿ ಒಮ್ಮತವಿಲ್ಲ. ಕಾಳಿದಾಸನೆಂಬ ಹೆಸರಿನ ಬೇರೆಯ ಕವಿಗಳು ಇದನ್ನು ಬರೆದಿರಬಹುದು ಎನ್ನುವುದೂ ಉಂಟು. ರಾಜಶೇಖರನೆಂಬ ಕವಿ ಮೂರು ಮಂದಿ ಕಾಳಿದಾಸರುಗಳನ್ನು ಹೆಸರಿಸುತ್ತಾನೆ: ಏಕೋಽಪಿ ಜೀಯತೇ ಹಂತ ಕಾಲಿದಾಸೋ ನ ಕೇನಚಿತ್ । ಶೃಂಗಾರೇ ಲಲಿತೋದ್ಗಾರೇ ಕಾಳಿದಾಸತ್ರಯೀ ಕಿಮು ॥[1] .

ಕಾಳಿದಾಸ ಸಂಸ್ಕೃತ ಕಾವ್ಯಪ್ರಪಂಚದಲ್ಲಿ 'ಕವಿಕುಲಗುರು' ಎಂದೇ ಹೆಸರುವಾಸಿಯಾಗಿದ್ದಾನೆ. 'ಕಾದಂಬರಿ'ಯ ಕರ್ತೃ ಬಾಣಭಟ್ಟ ಕಾಳಿದಾಸನನ್ನು ಹೀಗೆ ಸ್ಮರಿಸುತ್ತಾನೆ: ನಿರ್ಗತಾಸು ನ ವಾ ಕಸ್ಯ ಕಾಳಿದಾಸಸ್ಯ ಸೂಕ್ತಿಷು । ಪ್ರೀತಿರ್ಮಧುರಸಾರ್ದ್ರಾಸು ಮಂಜರೀಷ್ವಿವ ಜಾಯತೇ ॥ (ಕಾಳಿದಾಸನ ಪ್ರೀತಿ ತುಂಬಿದ ಮಧುರವಾಕ್ಯಗಳನ್ನು ಕೇಳಿದ ಮೇಲೆ ಯಾರ ಹೃದಯ ತಾನೇ ಮಕರಂದ ತುಂಬಿದ ಹೂವು ಅರಳುವಂತೆ ಅರಳುವುದಿಲ್ಲ?). ಭಾರತೀಯ ಕವಿಗಳಷ್ಟೇ ಅಲ್ಲ, ಗಯಟೆ, ಷೀಗಲ್ ಮುಂತಾದ ಪಾಶ್ಚಿಮಾತ್ಯ ಕವಿ ವಿದ್ವಾಂಸರುಗಳೂ ಕಾಳಿದಾಸನನ್ನು ಬಾಯ್ತುಂಬ ಹೊಗಳಿದ್ದಾರೆ. ಸಂಸ್ಕೃತ ಕಲಿತು ಕಾಳಿದಾಸನನ್ನು ತಮ್ಮ ಭಾಷೆಗಳಿಗೆ ಅನುವಾದಿಸಿದ್ದಾರೆ.

ಕಾಳಿದಾಸನ ಕಾವ್ಯದಿಂದ ಸಂಸ್ಕೃತ ಕಾವ್ಯಗಳು ವಿಶ್ವಸಾಹಿತ್ಯದ ಮಟ್ಟಕ್ಕೇರಿತು. ಅವನ ಶೈಲಿ ಅನನ್ಯ ಮತ್ತು ಅನನುಕರಣೀಯ ಎನ್ನುತ್ತಾರೆ. ಪುರಾಣದ ಸುದೀರ್ಘ, ನೀರಸ ನಿರೂಪಣೆಯಾಗಲಿ ಅಥವಾ ಅನಂತರದ ಕವಿಗಳಲ್ಲಿ ಕಂಡುಬರುವ ಆಡಂಬರ, ಅತಿರಂಜಿತತೆಗಳಾಗಲಿ ಅವನ ಸಹಜ, ಸರಳ ಶೈಲಿಯಲ್ಲಿ ಕಾಣಸಿಗುವುದಿಲ್ಲ. ಕಾಳಿದಾಸ ತಾನು ಬಳಸುವ ಉಪಮೆಗಳಿಂದಾಗಿ ವಿಶೇಷ ಮನ್ನಣೆ ಗಳಿಸಿದ್ದಾನೆ (ಉಪಮಾ ಕಾಳಿದಾಸಸ್ಯ, ಭಾರವೇರರ್ಥಗೌರವಮ್, ನೈಷಧಂ ವಿದ್ವದೌಷಧಂ ಮಾಘೇ ಸಂತಿ ತ್ರಯೋ ಗುಣಾಃ). ಉಪಮೆಯಷ್ಟೇ ಅಲ್ಲ ಅವನ ಕಾವ್ಯ ಅತ್ಯಂತ ಧ್ವನಿಪೂರ್ಣವಾದುದೂ ಹೌದು.

---

[1] ದಿ ಮೇಘದೂತ ಆಫ್ ಕಾಳಿದಾಸ, ಸಂ. ಎಂ.ಆರ್. ಕಾಳೆ, ಮುಂಬಯಿ 1934.

## ಮೇಘದೂತ ಮತ್ತು ನವೋದಯ ಸಂವೇದನೆ

ಈಗ ಕನ್ನಡದ ಮನಸ್ಸುಗಳು ನಿಧಾನವಾಗಿ ನವೋದಯ ಕವಿಗಳತ್ತ ಹೊರಳಲಾರಂಭಿಸಿವೆ. ಹಾಗೆ ನೋಡಿದರೆ ಎಲ್ಲ ಕಾಲದಲ್ಲೂ ಒಂದು ಓದುಗವರ್ಗಕ್ಕೆ ನವೋದಯ ಕಾವ್ಯ ಆಪ್ತವೇ ಆಗಿತ್ತು. ಆದರೆ ನಮ್ಮ ಕಾಲೇಜು, ವಿಶ್ವವಿದ್ಯಾಲಯಗಳಲ್ಲಿ ನವೋದಯ ಕವಿಗಳನ್ನು ರಮ್ಯ ಜೀವಿಗಳು, ಪ್ರಪಂಚಕ್ಕೆ ವಿಮುಖರು, ಪ್ರಕೃತಿಯನ್ನು ಆರಾಧಿಸುವವರು ಎಂದೇ ದಶಕಗಳಿಂದಲೂ ಪರಿಚಯಿಸಿಕೊಂಡು ಬರಲಾಗಿತ್ತು. ಅದರಲ್ಲೂ ನಗರ ಕೇಂದ್ರಿತ ಸಂವೇದನೆಯನ್ನೇ ಹಿರಿದಾಗಿ ಭಾವಿಸಿದ ನವ್ಯರಂತೂ ನವೋದಯ ಕವಿಗಳನ್ನು ಮಂದಿಯ ಮಧ್ಯೆ ವಾಸಿಸಲು ಅನರ್ಹರಾದ, ವಾನಪ್ರಸ್ಥಕ್ಕೋ ಅಥವಾ ಕಲ್ಪನಾ ಲೋಕಕ್ಕೋ ಹೋಗಿ ವಾಸಿಸಲು ಯೋಗ್ಯರಾದ ಕವಿಗಳೆಂದೇ ಬಿಂಬಿಸುತ್ತಿದ್ದರು. ಆದರೆ ಈಗ ಇವರ ಭರಾಟೆ ಕಡಿಮೆಯಾಗಿದೆ.

ಕೊರೊನಾದಿಂದ ದೆಹಲಿಯಲ್ಲಿ ತಿಂಗಳು ಗಟ್ಟಲೆ ಲಾಕ್‌ಡೌನ್ ಆದಾಗ ಅಲ್ಲಿನ ರಸ್ತೆಗಳಲ್ಲಿ ವಾಹನ ಸಂಚಾರ ಪೂರ್ತಿಯಾಗಿ ನಿಂತಿತ್ತು. ವಾಯುಮಾಲಿನ್ಯವಿಲ್ಲದ ಹೊಗೆರಹಿತವಾದ ಶುಭ್ರಾಕಾಶದಲ್ಲಿ ಹರಿಯಾಣಾದ ಜನ ಅದೆಷ್ಟೋ ವರ್ಷಗಳಾದ ಮೇಲೆ ಮೊತ್ತ ಮೊದಲ ಸಲ ದೂರದಲ್ಲಿ ಹಿಮಾಲಯದ ಉನ್ನತ ಶಿಖರಗಳನ್ನು ಕಂಡರಂತೆ. ಇದೀಗ ನವ್ಯ, ಬಂಡಾಯ ಮುಂತಾದವರ ಗದ್ದಲ, ಶಬ್ದಮಾಲಿನ್ಯಗಳು ನಿಂತಿರುವ ಸಮಯದಲ್ಲಿ ನವೋದಯ ಸಾಹಿತ್ಯ ಮತ್ತು ಅವರನ್ನು ಪ್ರೇರೇಪಿಸಿದ್ದ ಪ್ರಾಚೀನ ಕಾವ್ಯಗಳ ಆಸಕ್ತಿ ಮತ್ತೆ ಚಿಗುರೊಡೆಯುತ್ತಿದೆ. ನವ್ಯರ ಅಥವಾ ಬಂಡಾಯ ಚಳವಳಿಗಾರರ ಕಾಳಜಿಗಳನ್ನು ಯಾರೂ ಪ್ರಶ್ನಿಸುವುದಿಲ್ಲ. ಆದರೆ ಅವರು ಯಾವೆಲ್ಲ ಮೌಲ್ಯಗಳನ್ನು 'ತಮ್ಮ ಕಾಳಜಿ' ಎಂದು ಪ್ರಚಾರ ಮಾಡುತ್ತಿದ್ದರೋ ಅವೆಲ್ಲವೂ ನವೋದಯರ ಕೃತಿಗಳಲ್ಲಿ ಅವರ ಹುಟ್ಟಿಗೂ ಮುನ್ನವೇ ಅಂತರ್ನಿಹಿತವಾಗಿತ್ತು ಎಂಬುದನ್ನು ಸಾಹಿತ್ಯಾಸಕ್ತರಿಗೆ ಪ್ರತ್ಯೇಕವಾಗಿ ವಿವರಿಸಿ ಹೇಳಬೇಕಿಲ್ಲ.

ಒಬ್ಬ ಕವಿ ಮನುಷ್ಯ ಸಂವೇದನೆಯನ್ನು ಅದೆಷ್ಟು ಸಶಕ್ತವಾಗಿ ಅಭಿವ್ಯಕ್ತಿಸಬಲ್ಲ ಎಂಬುದರ ಮೇಲೆ ಅವನ ಹಿರಿಮೆ ತಿಳಿಯುತ್ತದೆ. ಮನುಷ್ಯ ಸಂವೇದನೆಯನ್ನು ನಿರ್ಲಕ್ಷಿಸುವ ಯಾವ ಕವಿಯನ್ನೂ ಮನುಷ್ಯಕುಲ ಬಹುಕಾಲದವರೆಗೆ ನೆನಪಿನಲ್ಲಿರಿಸಿಕೊಳ್ಳುವುದಿಲ್ಲ. ಮೇಘದೂತವನ್ನೂ ಒಳಗೊಂಡಂತೆ ಕಾಳಿದಾಸನ ಎಲ್ಲ ಕೃತಿಗಳೂ ಅವನ ಸಮಕಾಲೀನ ಸಮಾಜ ಮತ್ತು ಸಂಸ್ಕೃತಿಗಳನ್ನು ಪರಿಚಯಿಸಿಕೊಡುವುದರ ಜೊತೆಗೆ ಮಾನವೀಯ ಸಂವೇದನೆಗೂ ಧ್ವನಿ ನೀಡಿದೆ. 'ಮೇಘದೂತ'ದಲ್ಲಿ ಮಳೆ, ಮೋಡ, ಕಾಡು, ಹೂವು, ನದಿ, ಸರೋವರ, ಸಮುದ್ರ, ಖಗ-ಮೃಗ, ಪರ್ವತ, ಹಿಮ, ಮುಂತಾದ ಪ್ರಕೃತಿಯ ಎಲ್ಲ ಅಂಶಗಳೂ ಪ್ರಸ್ತಾಪವಾಗಿವೆಯಾದರೂ ಅವೆಲ್ಲವೂ ಮನುಷ್ಯ ಸಂವೇದನೆಗೆ ತೀವ್ರವಾಗಿ ಸ್ಪಂದಿಸುವ

ವಸ್ತುಗಳಾಗಿವೆ. ಅವೆಲ್ಲವೂ ಮಾನವ ಸಂವೇದನೆಯ ವಿವಿಧ ಮುಖಗಳಾಗಿವೆ, ವಿವಿಧ ಬಗೆಯ ರೂಪಕಗಳಾಗಿವೆ.

ಮೇಘದೂತ 121 ಪದ್ಯಗಳನ್ನುಳ್ಳ ಖಂಡಕಾವ್ಯವಾಗಿದ್ದು ಇದರಲ್ಲಿ ಪೂರ್ವಮೇಘ ಮತ್ತು ಉತ್ತರಮೇಘವೆಂಬ ಎರಡು ಭಾಗಗಳಿವೆ. ಕಾಳಿದಾಸನ ರಘುವಂಶ, ಕುಮಾರಸಂಭವ, ವಿಕ್ರಮೋರ್ವಶೀಯ, ಶಾಕುಂತಲ ಮುಂತಾದ ಎಲ್ಲ ಪ್ರಧಾನ ಕೃತಿಗಳೂ ಪುರಾಣ ಮತ್ತು ಪ್ರಾಚೀನ ಮಹಾಕಾವ್ಯಗಳ ವಸ್ತುವನ್ನು ಅಳವಡಿಸಿಕೊಂಡ ಕೃತಿಗಳಾಗಿವೆ. ಆದರೆ ಮೇಘದೂತ ಇದಕ್ಕೊಂದು ಅಪವಾದವಾಗಿದೆ. ಇದು ಅವನದೇ ಕಲ್ಪನೆಯಿಂದ ಸೃಷ್ಟಿಯಾದ ಕಾವ್ಯವಾಗಿದೆ.

ಕರ್ತವ್ಯ ಚ್ಯುತನಾಗಿ ಶಪಿತನಾದ ಯಕ್ಷ ಒಂದು ವರ್ಷಗಳ ಕಾಲ ತನ್ನ ಮಡದಿಯಿಂದ ದೂರವಿರಬೇಕಾಗುತ್ತದೆ. ಆ ಸಂದರ್ಭದಲ್ಲಿ ಅವನು ಮೋಡಗಳ ಮೂಲಕ ತನ್ನ ಮಡದಿಗೆ ಸಂದೇಶ ಕಳುಹಿಸುತ್ತಾನೆ. 'ಮೇಘದೂತ' ಕಾಳಿದಾಸನ ಆತ್ಮಕತೆಯಾಗಿದೆ ಎಂದು ಕೆಲವು ವಿದ್ವಾಂಸರು ಊಹಿಸುವರು. ವಿಕ್ರಮಾದಿತ್ಯನ ಆಸ್ಥಾನ ಕವಿಯಾಗಿದ್ದ ಕಾಳಿದಾಸ ಯಾವುದೋ ತಪ್ಪು ಮಾಡಿ ರಾಜ್ಯಭ್ರಷ್ಟನಾಗಿರಬೇಕು, ತನ್ನೂರು, ತನ್ನ ಮಡದಿಯಿಂದ ದೂರವಾದ ಯಕ್ಷನ ದುಃಖ ದುಗುಡಗಳು ಕಾಳಿದಾಸ ತನ್ನ ವೈಯಕ್ತಿಕ ಜೀವನದಲ್ಲಿ ಅನುಭವಿಸಿದ ದುಃಖ ದುಗುಡಗಳ ನಿರೂಪಣೆಯೇ ಆಗಿದೆ ಎನ್ನುವರು. ಇಂತಹ ಸಿದ್ಧಾಂತಗಳು ಅದೆಷ್ಟೇ ಸ್ವಾರಸ್ಯಕರವೆನಿಸಿದರೂ ಸೂಕ್ತ ರುಜುವಾತುಗಳಿಲ್ಲದೇ ಇದನ್ನೆಲ್ಲ ಸತ್ಯವೆಂದು ತೀರ್ಮಾನಿಸಲಾಗದು.

ಮೇಘದೂತ ರಾಮಾಯಣದಿಂದ ಸ್ಫೂರ್ತಿ ಪಡೆದ ಖಂಡಕಾವ್ಯವಾಗಿದೆ ಎಂದು ಕಾಳಿದಾಸನ ಕಾವ್ಯ ನಾಟಕಗಳನ್ನು ವ್ಯಾಖ್ಯಾನಿಸಿರುವ ಮಲ್ಲಿನಾಥ ಹೇಳುತ್ತಾನೆ[1]. ಮಲ್ಲಿನಾಥನ ಈ ಮಾತುಗಳನ್ನು ನಾವು ಒಪ್ಪಬಹುದಾಗಿದೆ. ಏಕೆಂದರೆ ಇದಕ್ಕೆ ಕವಿಯ ಕೃತಿಯಲ್ಲಿಯೂ ಪ್ರಮಾಣಗಳು ಸಿಗುತ್ತವೆ[2]. ಕಾಳಿದಾಸ ಆ ಒಂದು ಎಳೆಯನ್ನು ವಾಲ್ಮೀಕಿಯಿಂದ ತೆಗೆದುಕೊಂಡಿರಬಹುದು. ಉಳಿದಂತೆ ಅದರಲ್ಲಿನ ಎಲ್ಲ ವಿವರ, ವರ್ಣನೆ, ಸಂಭಾಷಣೆ, ಭಾವಾಭಿವ್ಯಕ್ತಿಗಳೂ ಕಾಳಿದಾಸನ ಸ್ವಂತದ್ದು. ವಾಲ್ಮೀಕಿ "ಮೇಘಾಭಿರಾಮಾ ಪರಿಸಂಪತಂತಿ ಸಮ್ಮೋದಿತಾ ಭಾತಿ ಬಲಾಕಪಂಕ್ತಿಃ। ವಾತಾವಧೂತಾ ವರಪೌಂಡರೀಕೀ ಲಂಬೇವ ಮಾಲಾ ರಚಿತಾಽಮ್ಬರಸ್ಯ॥" (ಮಳೆಮುಗಿಲಿನೆಡೆ ಮುದದಿಂದ ಹಾರುತ್ತಿರುವ ಕೊಕ್ಕರೆಸಾಲು ಬಾನ್ದೇವಿಯು ತಳೆದ, ಮಳೆಗಾಳಿಗೆ ತೊನೆವ ಬೆಳ್ದಾವರೆಗಳ ಮಾಲೆಯೋ ಎಂಬಂತಿತ್ತು) ಎಂಬ ಸಾಲುಗಳನ್ನು ಬರೆದರೆ ಕಾಳಿದಾಸ "ನೂನಮಾಬದ್ಧ

---

[1] ಸೀತಾಂ ಪ್ರತಿ ರಾಮಸ್ಯ ಹನುಮತ್ಸಂದೇಶಂ ಮನಸಿ ವಿಧಾಯ ಮೇಘಸಂದೇಶಂ ಕೃತವಾನಿತ್ಯಾಹುಃ (ಸೀತೆಗೆ ರಾಮ ಹನುಮಂತನ ಮೂಲಕ ಸಂದೇಶ ಕಳಿಸಿದ್ದನ್ನು ಮನಸ್ಸಿನಲ್ಲಿ ಇರಿಸಿಕೊಂಡು ಕವಿ ಮೇಘಸಂದೇಶವನ್ನು ರಚಿಸಿದ್ದಾನೆ ಎನ್ನಬಹುದು) – ಮಲ್ಲಿನಾಥ

[2] ಇತ್ಯಾಖ್ಯಾತೇ ಪವನತನಯಂ ಮೈಥಿಲೀವೋನ್ಮುಖೀ ಸಾ (2.40), (ಕನ್ನಡ ಮೇಘದೂತ 2.37)

ಮಾಲಾಃ ಸೇವಿಷ್ಯಂತೇ ನಯನ ಸುಭಗಂ ಖೇ ಭವಂತಂ ಬಲಾಕಾಃ" ಎಂದು ಬರೆಯುತ್ತಾನೆ. ವಾಲ್ಮೀಕಿ "ಪ್ರವಾಸಿನೋ ಯಾಂತಿ ನರಾಃ ಸ್ವದೇಶಾನ್" ಎಂದರೆ ಕಾಳಿದಾಸ "ಯೋ ವೃಂದಾನಿ ತ್ವರಯತಿ ಪಥಿ ಶ್ರಾಮ್ಯತಾಂ ಪ್ರೋಷಿತಾನಾಂ" ಎನ್ನುತ್ತಾನೆ. ಇಂತಹ ಕಡೆಗಳಲ್ಲಿ ಕಾಳಿದಾಸ ವಾಲ್ಮೀಕಿಯಿಂದ ಅದೆಷ್ಟು ಪ್ರಭಾವಿತನಾಗಿದ್ದ ಎಂಬುದು ತಿಳಿಯುತ್ತದೆ. ಬರೀ ಮೇಘದೂತದಲ್ಲಷ್ಟೇ ಅಲ್ಲ, ಅವನ ಇತರ ಕಾವ್ಯ ನಾಟಕಗಳಲ್ಲೂ ವಾಲ್ಮೀಕಿಯ ಪ್ರಭಾವವನ್ನು ಗುರುತಿಸಬಹುದು.

ಪೂರ್ವಮೇಘದಲ್ಲಿ ಬಹಿರಂಗ ಲೋಕದ, ಬಹಿರಂಗ ಸ್ಥಳಗಳ ವರ್ಣನೆಯ ಜೊತೆ ಜೊತೆಗೆ ಅಂತರಂಗದ ದುಃಖ, ಶೋಕ, ವಿರಹಗಳ ನಿರೂಪಣೆಯೂ ಇದೆ. ಉತ್ತರ ಮೇಘದಲ್ಲಿ ಅವನ 'ಸಂದೇಶ'ದ ಜೊತೆಜೊತೆಗೆ ಅಲಕೆಯ (ಮನುಷ್ಯ ಬದುಕಿನ) ಸುಖ, ವೈಭವ, ರಸಿಕತೆಗಳ ವರ್ಣನೆಯೂ ಇದೆ. ಕವಿ ತನ್ನ ಕೃತಿಯಲ್ಲಿ ಬಹಿರಂಗದ ಪ್ರಕೃತಿ ಲೋಕದಿಂದ ಅಂತರಂಗದ ಭಾವನಾ ಲೋಕದೊಳಗೆ ಲೀಲಾಜಾಲವಾಗಿ ಪಯಣಿಸಬಲ್ಲ ಮತ್ತು ಅವೆರಡೂ ಅಭಿನ್ನವೆಂದು ತಿಳಿವಂತೆ ಸಹೃದಯನನ್ನು ಸಜ್ಜುಗೊಳಿಸಬಲ್ಲ.

ಅಂತರಂಗದ ನಾನಾ ಭಾವವಿಕಲ್ಪಗಳ ನಕ್ಷೆಯನ್ನು ಚಿತ್ರಿಸುವ ಪೂರ್ವಮೇಘ ಒಂದು ಪ್ರವಾಸೀ ಕಥನವೂ ಹೌದು. ದಕ್ಷಿಣದ ರಾಮಗಿರಿಯ ಪುಣ್ಯಾಶ್ರಮದಿಂದ ಹಿಡಿದು ಉತ್ತರದ ಹಿಮಾಲಯದವರೆಗೆ ಭಾರತದಾದ್ಯಂತ ಹರಡಿರುವ ನಾನಾ ವನಗಳು, ಋಷ್ಯಾಶ್ರಮಗಳು, ಕಾಡು, ನದಿ, ನಗರ, ಪುಣ್ಯಕ್ಷೇತ್ರಗಳ ಪರಿಚಯ ಪೂರ್ವಮೇಘದಲ್ಲಿದೆ. ತಾನು ಭೇಟಿ ನೀಡಿದ, ತನ್ನ ಕಣ್ಮನಗಳನ್ನು ಸೆಳೆದ ಉಜ್ಜಯಿನಿ, ದಶಾರ್ಣ ಮುಂತಾದ ನಗರಗಳ, ನದಿಗಳ, ಪರ್ವತಗಳ ಪ್ರೀತಿಯ ನೆನಪುಗಳನ್ನು ಜತನದಿಂದ ಕಾಪಾಡಿಕೊಳ್ಳುವ ಅಥವಾ ಆ ಸ್ಥಳಗಳನ್ನು ಅಜರಾಮರವಾಗಿಸುವ ಸಲುವಾಗಿಯೇ ಅವನು ಪೂರ್ವಮೇಘವನ್ನು ರಚಿಸಿದನೇನೋ ಎನ್ನುವಂತಿದೆ.

ಇನ್ನು ಉತ್ತರ ಮೇಘದ ಆಶಯ 'ಸಂದೇಶ'ವನ್ನು ಅವಳಿಗೆ ತಲುಪಿಸುವುದಾಗಿದ್ದರೂ ಈ ಭಾಗವು ಅಲಕೆಯ ಪರಿಸರ, ಸುಖ ವೈಭೋಗಗಳ ವರ್ಣನೆಗಳಿಂದಲೇ ತುಂಬಿದೆ. ಪೂರ್ವಮೇಘದಲ್ಲಿ ಯಕ್ಷನ ಗಮನ ಅಂತರಂಗದ ಭಾವಲೋಕದಿಂದ ಬಹಿರಂಗದ ಜೀವಲೋಕದತ್ತ ಹರಿದರೆ ಉತ್ತರ ಮೇಘದಲ್ಲಿ ಅವನ ಚಿತ್ತ ಬಹಿರಂಗದಿಂದ ಅಂತರಂಗದ ಕಡೆಗೆ ಹೊರಳುತ್ತದೆ. ಈ ಭಾಗದಲ್ಲಿ ಪ್ರಧಾನವಾಗಿ ಯಕ್ಷನ ಮಡದಿಯ ಅವಸ್ಥೆ ಮತ್ತು ಕೋಮಲವಾದ ಮನಃಸ್ಥಿತಿಯ ಚಿತ್ರಣವಿದೆ. ಇಂತಹ ಕೋಮಲವಾದ ಸ್ತ್ರೀಪಾತ್ರ ಚಿತ್ರಣದ ಹೊಣೆಗಾರಿಕೆ ಕಾಳಿದಾಸನಂತಹ ಸಂಯಮ ಪೂರ್ಣ ಕವಿಯನ್ನು ಬಿಟ್ಟು ಬೇರೆ ಮತ್ತೊಬ್ಬ ಕವಿಯ ಕೈಗೇನಾದರೂ ಸಿಕ್ಕಿದ್ದರೆ ಅವನು ಅವಳ ಭಾವತೀವ್ರತೆಯನ್ನು ಮರುಳುತನದೊಳಗೆ ಮುಳುಗಿಸಿಬಿಟ್ಟಿರುತ್ತಿದ್ದ. ಅಲಕೆಯ ಎಲ್ಲ ಸುಖವೈಭವಗಳ ನಡುವೆ,

ಸುಖಿಗಳಾದ ಪುಣ್ಯಶಾಲಿಗಳಾದ ಜನಗಳ ಮಧ್ಯೆ ಅವಳೊಬ್ಬಳೇ ಸುಖಹೀನಳಂತೆ, ನತದೃಷ್ಟಳಂತೆ ಬಾಳ್ವೆ ಮಾಡುತ್ತಿರುತ್ತಾಳೆ. ತನ್ನ ದುಃಖದಿಂದ ಹೊರಬರುವ ಪ್ರಯತ್ನವಾಗಿ ಅವಳು ತನ್ನೊಡೆಯನ ಚಿತ್ರ ಬರೆಯುತ್ತಾಳೆ, ವೀಣೆ ನುಡಿಸುತ್ತ ತನ್ನೊಡೆಯನ ಹೆಸರಿನಲ್ಲಿ ಹಾಡಲು ಪ್ರಯತ್ನಿಸುತ್ತಾಳೆ. ಅವಳ ವೇದನೆಯ ಮುಂದೆ ಸಂಗೀತ, ನೃತ್ಯ, ಸಾಹಿತ್ಯ, ಚಿತ್ರಕಲೆ ಮುಂತಾದ ಎಲ್ಲವೂ ಸೋಲುತ್ತವೆ. ಆ ವೇದನೆಯನ್ನು ನೀಗಿಸಿಕೊಳ್ಳಲು ಅವಳು ದಿನಗಳನ್ನು, ತಿಂಗಳುಗಳನ್ನು ಎಣಿಸಲು ಇಲ್ಲವೇ ಅವನೊಂದಿಗಿನ ಸುಖಕರವಾದ ಗಳಿಗೆಯ ನೆನಪುಗಳನ್ನು ಮರುಕಳಿಸಿಕೊಳ್ಳಲು ಪ್ರಯತ್ನಿಸುತ್ತಾಳೆ. ಹಾಸಿಗೆಯಲ್ಲಿ ಮಲಗಿದಾಗ ನಿದ್ರೆಯಿಲ್ಲದೇ ಹೊರಳಾಡುತ್ತಿದ್ದಳು, ಎಚ್ಚರದಲ್ಲಿದ್ದಾಗ ತಿಂದಿದ್ದು ಮೈಗೆ ಹತ್ತದೇ ಸಣ್ಣಗಾಗುತ್ತಿದ್ದಳು. ತನ್ನ ದೈನಂದಿನ ಅಗತ್ಯಗಳನ್ನು ಪೂರೈಸಿಕೊಳ್ಳಲೂ ಅವಳಿಗೆ ಸಾಧ್ಯವಾಗಲಿಲ್ಲ. ಕೊನೆಕೊನೆಗೆ ಕನಸು ಕಾಣಲೂ ಅವಳಿಗೆ ಸಾಧ್ಯವಾಗದೇ ಹೋಯಿತು. ಅವಳ ದುಃಖ ಅವಳನ್ನು ಶಾರೀರಿಕವಾಗಿ, ಮಾನಸಿಕವಾಗಿ ದಿನೇ ದಿನೇ ದುರ್ಬಲಳನ್ನಾಗಿ ಮಾಡುತ್ತಿತ್ತು. ಇಷ್ಟಾಗಿಯೂ ಮುಂದೊಂದು ದಿವಸ ತನ್ನ ಗಂಡನನ್ನು ಸೇರುತ್ತೇನೆ ಎಂಬ ಭರವಸೆಯೊಂದೇ ಅವಳನ್ನು ಹುಚ್ಚಿಯಾಗದಂತೆ ತಡೆ ಹಿಡಿದಿತ್ತು. ಇವಳದ್ದು ಲೌಕಿಕನೆಲೆಯ ಕ್ಷಣಭಂಗುರವಾದ ಕಾಮವಿಕಲ್ಪವಲ್ಲ. ಇದು ಪ್ರೇಮದ ಒಂದು ಉದಾತ್ತವಾದ ಮಾದರಿಯಾಗಿದೆ. "ಯಕ್ಷನ ಮಡದಿಯು ಕಾಳಿದಾಸನ ಇತರ ಕೃತಿಗಳ ನಾಯಕಿಯರುಗಳಾದ ಶಾಕುಂತಲೆ, ಪಾರ್ವತಿ, ಇಂದುಮತಿ, ಸೀತೆಯರಿಗೆ ಸರಿಗಟ್ಟಬಲ್ಲ ಪಾತ್ರವಾಗಿದೆ" ಎಂದು ಎಂ.ಆರ್. ಕಾಳೆ ಅಭಿಪ್ರಾಯ ಪಡುತ್ತಾರೆ.

ಕಾಳಿದಾಸನ ಕಾವ್ಯಗಳ ವಿಶೇಷತೆ ಏನೆಂದರೆ ಅವನ ಒಂದೊಂದು ಸಾಲೂ ಅರ್ಥಪೂರ್ಣವಾದುದು, ಧ್ವನಿಪೂರ್ಣವಾದುದು. ಅವನು ಒಂದೇ ಒಂದು ಸಾಲನ್ನೂ ವ್ಯರ್ಥವಾಗಿ, ಹೆಚ್ಚುವರಿಯಾಗಿ, ಪುನರುಕ್ತಿಯಾಗಿ ಬಳಸುವುದಿಲ್ಲ. ಹಾಗೊಂದು ವೇಳೆ ಪುನರುಚ್ಚರಿಸಿದರೂ ಅದು ಕಾವ್ಯದ ಪರಿಣಾಮವನ್ನು ತೀವ್ರಗೊಳಿಸುವ ಸಲುವಾಗಿಯೇ ಹೊರತು ವಾಗಾಡಂಬರಕ್ಕಾಗಿ ಅಲ್ಲ. ಈ ಹಿಂದೆ ಹೇಳಿದಂತೆ ಅವನು ಬಳಸುವ ಉಪಮೆಗಳಲ್ಲಿ ಅವನ ಪ್ರತಿಭೆ ಪರಾಕಾಷ್ಠೆ ತಲುಪುತ್ತದೆ. ಕಾಳಿದಾಸನ ಕಾವ್ಯವು ಚಿತ್ರಕಲೆ, ಸಂಗೀತಗಳಿಗೂ ಮೂಲ ಪ್ರೇರಣೆಯಾಗಬಲ್ಲದು. ಅವನು ಆಯ್ಕೆ ಮಾಡಿಕೊಳ್ಳುವ ಛಂದಸ್ಸೂ ಸಹ ಕಾವ್ಯದ ವಸ್ತುವಿಗೆ ಔಚಿತ್ರಪೂರ್ಣವಾದುದಾಗಿರುತ್ತದೆ. ಇಡೀ ಮೇಘದೂತ ಕಾವ್ಯವನ್ನು ಮಂದಾಕ್ರಾಂತ ವೃತ್ತದಲ್ಲಿ ರಚಿಸಿದ್ದಾನೆ. ಮಂದಾಕ್ರಾಂತವು ಅದರ ಹೆಸರೇ ಹೇಳುವಂತೆ ಮಂದಗತಿಯಲ್ಲಿ ಕ್ರಮಿಸುವ ಭಾವವನ್ನು ಅಭಿವ್ಯಕ್ತಿಸಲು ಬಳಸುವ ಛಂದೋರೂಪವಾಗಿದೆ. ಕುವೆಂಪು ಅವರ "ಇಲ್ಲಿ ಅವಸರವೂ ನಿಧಾನದ ಬೆನ್ನೇರಿದೆ" ಎಂಬ ಮಾತು ಮಂದಾಕ್ರಾಂತಕ್ಕೆ ಹೆಚ್ಚು ಪ್ರಕೃತವಾಗುತ್ತದೆ. ಮಂದಾಕ್ರಾಂತದಲ್ಲಿ ಕಾಳಿದಾಸನು ಸಂಗೀತ, ಸೌಂದರ್ಯ, ಉದಾತ್ತತೆ, ಭಾವತೀವ್ರತೆ, ಹುಚ್ಚುತನ ಮುಂತಾದ ವೈರುದ್ಧ್ಯಕರ ಭಾವವಿಕಲ್ಪಗಳನ್ನು ಬಹುಕೌಶಲ್ಯಪೂರ್ಣವಾಗಿ ಹೆಣೆದಿದ್ದಾನೆ.

ಅಭಿಜ್ಞಾನ ಶಾಕುಂತಲದ ನಂತರ ಕಾಳಿದಾಸನ ಕೃತಿಗಳಲ್ಲೇ ಅತಿಹೆಚ್ಚು ಪ್ರೀತಿ, ಪ್ರಶಂಸೆಗಳಿಗೆ ಪಾತ್ರವಾದ ಕೃತಿ 'ಮೇಘದೂತ'. ಅದು ಇಂದು ನಿನ್ನೆಯಿಂದಲ್ಲ, ಅದು ರಚನೆಯಾದ ಕಾಲದಿಂದಲೂ ಕಾವ್ಯಪ್ರೇಮಿಗಳಿಗೆ ಅತ್ಯಂತ ಪ್ರಿಯವಾದ ಕಾವ್ಯವಾಗಿದೆ. ಮೇಘದೂತದ ನಂತರ ಸಂಸ್ಕೃತ ಸಾಹಿತ್ಯದಲ್ಲಿ 'ಸಂದೇಶಕಾವ್ಯ' ಎಂಬ ಹೊಸ ಸಾಹಿತ್ಯ ಪ್ರಕಾರವೇ ಸೃಷ್ಟಿಯಾಯಿತು. ಒಂದು ಹೊಸ ಪರಂಪರೆ ಪ್ರಾರಂಭವಾಯಿತು. 'ಮೇಘ ಸಂದೇಶ'ವನ್ನು ಅನುಕರಿಸಿ ಅದೆಷ್ಟೋ ಮಂದಿ ಕವಿಗಳು ಬಗೆ ಬಗೆಯ ಸಂದೇಶ ಕಾವ್ಯಗಳನ್ನು ರಚಿಸಿದ್ದಾರೆ. ಕ್ರಿ.ಶ. 8ನೇ ಶತಮಾನದಲ್ಲಿ ಜಿನಸೇನ ಎಂಬ ಜೈನಕವಿ 'ಪಾರ್ಶ್ವಾಭ್ಯುದಯ' ಎಂಬ ನಾಲ್ಕು ಸಾಲಿನ ಪದ್ಯಗಳುಳ್ಳ ಕಾವ್ಯವನ್ನು ರಚಿಸಿದ್ದಾನೆ. ಪಾರ್ಶ್ವನಾಥ ತೀರ್ಥಂಕರನ ಚರಿತ್ರೆಯನ್ನು ವರ್ಣಿಸುವ ಈ ಕಾವ್ಯದ ಪ್ರತಿ ಪದ್ಯದಲ್ಲೂ ಕವಿ ಮೇಘದೂತದ ಒಂದು ಇಲ್ಲವೇ ಎರಡು ಸಾಲನ್ನು ಸೇರಿಸುತ್ತಾನೆ. ಈ ಕಾವ್ಯದಲ್ಲಿ ಪಾರ್ಶ್ವಾಭ್ಯುದಯ ಮತ್ತು ಮೇಘದೂತ ಕಾವ್ಯಗಳು ಜೊತೆ ಜೊತೆಗೆ ಸಾಗುತ್ತವೆ. ಇದಲ್ಲದೇ ಇಂತಹ ಇನ್ನೂ ಹತ್ತು ಹಲವು –ಪವನದೂತ, ನೇಮಿದೂತ, ಉದ್ಧವದೂತ– ಮುಂತಾದ ದೂತಕಾವ್ಯಗಳು ಬಂದಿದ್ದು ಅವನ್ನು ಮುಂದೆ ಪರಿಶೀಲಿಸಲಾಗುವುದು.

**ಕನ್ನಡ ಮೇಘದೂತ**

'ಶ್ರೀರಾಮಾಯಣ ದರ್ಶನಂ' ರಚಿಸಿದ ರಸಋಷಿ ಕುವೆಂಪು ವಾಲ್ಮೀಕಿಯ ರಾಮಾಯಣಕ್ಕೆ ಕಾಯಕಲ್ಪ ನೀಡಿದರೆ ವರಕವಿ ಬೇಂದ್ರೆ ವಾಲ್ಮೀಕಿಯ ಶಿಶುವಾದ ಕಾಳಿದಾಸನ ಕಾವ್ಯವನ್ನು ಸುಧಾರಿಸಿದ್ದಾರೆ. ಹಾಗೆ ನೋಡಿದರೆ ವಾಲ್ಮೀಕಿ ರಾಮಾಯಣಕ್ಕೆ ಕಾಯಕಲ್ಪ ನೀಡುವುದು ಕುವೆಂಪು ಅವರ ಪ್ರತಿಭಾಶಕ್ತಿಗೆ ಸವಾಲಿನ ಕೆಲಸವೇನೂ ಆಗಿರಲಿಲ್ಲ. ಏಕೆಂದರೆ ವಾಲ್ಮೀಕಿ ರಚಿಸಿದ ರಾಮಾಯಣದಲ್ಲಿ ಅದಾಗಲೇ ಸಾಕಷ್ಟು ಪ್ರಕ್ಷಿಪ್ತಗಳು ಸೇರಿಕೊಂಡಿದ್ದವು, ಸದ್ಯಕ್ಕೆ ವಾಲ್ಮೀಕಿ ರಾಮಾಯಣದಲ್ಲಿ ಒಟ್ಟು 24000 ಶ್ಲೋಕಗಳಿದ್ದು ಪ್ರಧಾನವಾಗಿ ಮೂರು ಪಠ್ಯಗಳನ್ನು – ಬಾಂಬೆ ಪ್ರತಿ, ಬಂಗಾಳಿ ಪ್ರತಿ ಮತ್ತು ಮಧ್ಯ ಭಾರತದ ಪ್ರತಿ – ಗುರುತಿಸಲಾಗಿದೆ. ಮೂರು ಪ್ರತಿಗಳಲ್ಲಿ ಸಾಕಷ್ಟು ಮಾರ್ಪಾಟುಗಳು ನಡೆದಿದ್ದು ಸರಾಸರಿಯಾಗಿ ಹೇಳುವುದಾದರೆ, ಒಂದು ಪಠ್ಯದ ಮೂರನೆಯ ಒಂದು ಭಾಗದಷ್ಟು ಶ್ಲೋಕಗಳು ಉಳಿದೆರಡು ಪಠ್ಯಗಳಲ್ಲಿ ಕಾಣಸಿಗುವುದಿಲ್ಲ. ಅಂದರೆ ಸುಮಾರು 8000 ಶ್ಲೋಕಗಳಷ್ಟೇ ಮೂರೂ ಪಠ್ಯಗಳಲ್ಲಿ ಸಮಾನವಾಗಿ ಕಾಣಸಿಗುತ್ತವೆ. ಈ 8000 ಶ್ಲೋಕಗಳನ್ನು ಆಧರಿಸಿ ಮೂಲ ವಾಲ್ಮೀಕಿ ರಾಮಾಯಣದ ಸ್ವರೂಪ ಏನಾಗಿತ್ತೆಂದು ಸ್ವಲ್ಪಮಟ್ಟಿಗೆ ಊಹಿಸಬಹುದಾಗಿದೆ. ಬಾಂಬೆ ಪ್ರತಿಯಲ್ಲಿ ಪ್ರಾಚೀನ ಕಾವ್ಯಭಾಷೆಯ ಕೆಲವು ದೋಷಗಳು ಹಾಗೇ ಉಳಿದಿದ್ದರೆ ಉಳಿದೆರಡು ಪ್ರತಿಗಳಲ್ಲಿ ಆ ದೋಷಗಳನ್ನು ಸರಿಪಡಿಸಲಾಗಿದೆ. ತ್ರೇತಾಯುಗದಿಂದ ಹಿಡಿದು ಈ ಯುಗದವರೆಗಿನ ಸಮಾಜದ ನಾನಾ ಬಗೆಯ ಅನಿಷ್ಟಗಳು, ಅನ್ಯ ಹಿತಾಸಕ್ತಿಗಳು ರಾಮಾಯಣದಲ್ಲಿ ಸೇರ್ಪಡೆಗೊಂಡಿದ್ದವು. ಅದು ಶೂದ್ರತಪಸ್ವಿಯ ಪ್ರಸಂಗವಿರಬಹುದು, ರಾಮನಿಂದ

ವಾಲಿಗಾದ ಅನ್ಯಾಯವನ್ನು ಸಮರ್ಥಿಸಿಕೊಳ್ಳುವ ಧೋರಣೆ ಇರಬಹುದು, ಸೀತೆಗೆ ಅಗ್ನಿಪ್ರವೇಶ ಮಾಡಿಸಿದ ಕಠೋರತನವಿರಬಹುದು, ರಾಮನ ಹೆಚ್ಚುಗಾರಿಕೆಯನ್ನು ಎತ್ತಿ ಹಿಡಿಯಲು ವಾನರ ವಂಶ, ದಾನವ ವಂಶ, ಜಾಂಬವ ವಂಶದ ಪ್ರಜೆಗಳನ್ನು ನಿಜವಾಗಿಯೂ ಕೋತಿ, ಕರಡಿಗಳಂತೆ, ರಾಕ್ಷಸರಂತೆ ಬಿಂಬಿಸುವುದಿರಬಹುದು. ಕುವೆಂಪುರಂತಹ ಒಂದು ಪ್ರತಿಭೆ ಇಂತಹ ದೋಷಗಳನ್ನು ತೊಡೆದು ಹಾಕಿ ರಾಮಾಯಣದ ಪಾವಿತ್ರ್ಯವನ್ನು ಉಳಿಸಬೇಕಾದುದು ನಮ್ಮ ಸಾಂಸ್ಕೃತಿಕ ಅಗತ್ಯವೇ ಆಗಿತ್ತು.

ಆದರೆ ಕಾಳಿದಾಸನನ್ನು ಸುಧಾರಿತ ರೂಪದಲ್ಲಿ ಮರುಸೃಷ್ಟಿಸುವುದು ಸಾಧಾರಣ ಕೆಲಸವಲ್ಲ. ಕಾಳಿದಾಸನ ಕೃತಿಗಳು ವ್ಯಾಸ ವಾಲ್ಮೀಕಿಯರ ಕಾವ್ಯದಂತೆ ಪ್ರಕ್ಷಿಪ್ತಗೊಂಡಿಲ್ಲ. ಹೆಚ್ಚೆಂದರೆ ಲಿಪಿಕಾರರ ಕಣ್ತಪ್ಪಿನಿಂದಾಗಿ ಕೆಲವಾರು ಪದಗಳು ಅಥವಾ ವಾಕ್ಯಗಳಲ್ಲಿ ವ್ಯತ್ಯಾಸವಾಗಿರಬಹುದು. ಇಂತಹ ಕಾಳಿದಾಸನನ್ನು ಸುಧಾರಿತ ನೆಲೆಗೇರಿಸಿ ಅನುವಾದಿಸಲು ಕಾಳಿದಾಸನಿಗೆ ಸರಿಗಟ್ಟಬಲ್ಲ ಪ್ರತಿಭೆ, ಒಳನೋಟಗಳಿರಬೇಕಾಗುತ್ತದೆ.

ಬೇಂದ್ರೆಯವರು ಕವಿ ಕಾಳಿದಾಸನ ಅಂತರಂಗವನ್ನು ಮಿಡಿದು ರಚಿಸಿದ ಕವನ 'ಕಾಳಿದಾಸ'. ಅದು ಹದಿನಾಲ್ಕು ಸಾಲಿನ ಸಾನೆಟ್ ರಚನೆಯಲ್ಲಿದೆ. ಅದು ಜಗತ್ತಿನ ಕವಿಗಳೆಲ್ಲರ ಆದರ್ಶ ಚಿಂತನೆಯನ್ನು ಪ್ರತಿಬಿಂಬಿಸಿದೆ. ಜಗದ ಎಲ್ಲ ಕವಿಗಳ ಉದ್ದೇಶ ಅಜ್ಞಾನದ ಕತ್ತಲನ್ನು ಹೊರದೂಡಿ ಜ್ಞಾನದ ಬೆಳಕನ್ನು ಹರಿಸುವುದಾಗಿದೆ.

ಕವಿಯ ದಿವ್ಯ ಭವ್ಯ ಮಂಗಳ ಹೃದಯದಲ್ಲಿ ಜಗದ ಒಳಿತಿನ ಹಿರಿಬೆಳಕಿನ ಮಿಸುಕಾಟವೇ ಹಿಗ್ಗಿ ಕತ್ತಲೆಯನ್ನು ಇಲ್ಲವಾಗಿಸಿದೆ; ಬೆಳಕಿಗೆ ಬಾಗಿಕೊಂಡಿದೆ. ಅದು ಈ ವಿಶ್ವದ ಬದುಕಿನ ಬವಣೆಯ ನೋವು ನರಳಾಟವೆಂಬ ಸಾವನ್ನು ಸುಲಿಸುಲಿಯುತ್ತ ಬಾಳಿನ ಆಂತರ್ಯದ ಸತ್ತ್ವ ಸಾರವೆಂಬ ತಿರುಳನ್ನು ಬಾಳೆ ಹಣ್ಣಿನ ತಿಳಲುವಿನಂತೆ ತಾನು ಸವಿದು ಸಹೃದಯರಿಗೂ ನೀಡುವಂತಹುದಾಗಿದೆ! ಆ ಉನ್ನತಭಾವ ಕವಿಯ ಪ್ರತಿಭಾಕಿರಣದಲ್ಲಿ ಛಂದಃಪೂರ್ಣವಾಗಿ ಅಲಂಕಾರಸಾರದೊಡನೆ ಪ್ರಕಟವಾಗಿದೆ. ಆ ಶ್ರೇಷ್ಠ ಗುಣವನ್ನು ಕಾಳಿದಾಸನಲ್ಲಿ ಕಂಡ ಬೇಂದ್ರೆಯವರು ಅದನ್ನು ಹೀಗೆ ಕವನದಲ್ಲಿ ಹಿಡಿದಿಟ್ಟಿದ್ದಾರೆ:

*ಆ ಕಾವ ನೋವೆ ಹಲವೊಲವಿನಲಿ ಹಾಡಾಗಿ*
*ಯಾವುದೋ ಹಿರಿಬೆಳಕ ಮಿಸುಕಾಟವೇ ಹಿಗ್ಗಿ*
*ಇಲ್ಲದುಂಟಾಗಿ ಕತ್ತಲೆಯು ಬೆಳಕಿಗೆ ಬಾಗಿ*
*ಸಾವು ಸುಲಿಯಲು ಬಾಳೆ ತಿಳಲು ಎನೆ ಸವಿಗೂಡಿ*
*ಮುದ್ದಾಟವೆನೆ ಬಂತು ಕಾಳಿದಾಸನ ನುಗ್ಗಿ (ಮುಕ್ತಕಂಠ)*

ಬೇಂದ್ರೆಯವರು ಕಾಳಿದಾಸನನ್ನು ಕುರಿತು ಹೀಗೆ ತಿಳಿಸಿದ್ದಾರೆ: "ವಾಲ್ಮೀಕಿ ವ್ಯಾಸರಂತೆ ಕಾಳಿದಾಸನೂ ಭಾರತೀಯ ಸಂಸ್ಕೃತಿಗೆ ಖ್ಯಾತಿ ತಂದ ಭೂಷಣ ಪ್ರಾಯನಾದ ಕವಿ,...

ಸ್ವಾತಂತ್ರ್ಯೋತ್ತರ ಭಾರತದಲ್ಲಿ ಕಾಳಿದಾಸನ ಕೃತಿಗಳಿಗೆ ಹೊಸ ಪ್ರತಿಷ್ಠೆ ಬರುತಲಿದೆ. ಕನ್ನಡ ಜನ, ಕಾಳಿದಾಸನನ್ನು ಎಂದಿನಿಂದಲೂ ಸೀಮಾ ಕೃತಿಕಾರನೆನ್ನುವಂತೆ ಸ್ಮರಿಸುತ್ತಲೇ ಬಂದಿದ್ದಾರೆ".

ವಿಜಾಪುರ ಜಿಲ್ಲೆ ಐಹೊಳೆಯ ಸುತ್ತಲಿನ ಸಾಮ್ರಾಜ್ಯ ವೈಭವ ಉರುಳಿ ತೆರಳಿ ಹೋದರೂ ತನ್ನೊಂದು ಕಲ್ಲಿನಲ್ಲಿ ಅವನ ಹೆಸರನ್ನು ಕೆತ್ತಿ ಎತ್ತಿಕೊಂಡು ಇಂದೂ ಎದೆಗವಚಿ ನಿಂತಿದೆ. ದಿಗಂತ ಕೀರ್ತಿಯಾದ ಪುಲಿಕೇಶಿ ಮಹಾರಾಜನ ಶಾಸನ ಕವಿ ರವಿಕೀರ್ತಿಯು:

*ಸವಿಜಯತಾಂ ರವಿಕೀರ್ತಿಃ*
*ಕವಿತಾಶ್ರಿತ ಕಾಲಿದಾಸ ಭಾರವಿ ಕೀರ್ತಿಃ*

ಎಂದು ಹುಮ್ಮಸ್ಸಿನಿಂದ ಹೇಳಿಕೊಳ್ಳುತ್ತಾನೆ. ಕಾಳಿದಾಸನು ಪುಲಿಕೇಶಿಯ ಕಾಲಕ್ಕೆ ಕವಿಗಳಿಗೆ ಮೇಲುಪಂಕ್ತಿಯ ಆದರ್ಶವಾಗಿದ್ದನು" (ಸಾಹಿತ್ಯದ ವಿರಾಟ್ ಸ್ವರೂಪ, ಪುಟ 661,662)

ಬೇಂದ್ರೆಯವರು 'ಮಾತೆಲ್ಲ ಜ್ಯೋತಿ' ಉಪನ್ಯಾಸ ಕೃತಿಯಲ್ಲಿ "ಆ ಕಾಳಿದಾಸನ ಒಂದು ಸೇವೆ ನನ್ನಿಂದಾಗಲಿ ಎಂದು ನಾನು ಅವನ 'ಮೇಘದೂತ'ವನ್ನು ಕನ್ನಡಿಸಿದ್ದೇನೆ – ಆ ನನ್ನ ಮೇಘದೂತ ಅನುವಾದವನ್ನು ಓದಿದವರು ಅದರ ಪೀಠಿಕಾ ಪದ್ಯಗಳನ್ನು ಪ್ರಾಯಶಃ ಓದುವುದಿಲ್ಲ" (ಪುಟ 65) ಎಂದು ಹೇಳಿದ್ದಾರೆ. ಅವರು 'ಸಾಹಿತ್ಯದ ವಿರಾಟ್ ಸ್ವರೂಪ'(ಪುಟ 661 ರಿಂದ 718)ದಲ್ಲಿ ಕಾಳಿದಾಸನ ಕುರಿತು ಒಂಬತ್ತು ಮೌಲಿಕ ವಿಮರ್ಶೆ ಬರೆದಿದ್ದು ಅವುಗಳಲ್ಲಿ ಆರು 'ಶಾಕುಂತಲ'ವನ್ನು ಕುರಿತದ್ದಾಗಿದೆ.

ಬೇಂದ್ರೆಯವರು ಕಾಳಿದಾಸನ ಮೇಘದೂತದ 'ಭಾವಗ್ರಹಣ'ವನ್ನು 'ಕನ್ನಡ ಮೇಘದೂತ'ವಾಗಿ 1943ರಲ್ಲಿ ಪ್ರಕಟಿಸಿದ್ದಾರೆ. ಅದರ ಪ್ರಸ್ತಾವನೆಯಲ್ಲಿ "ಮೇಘದೂತದಲ್ಲಿ ಒಬ್ಬ ಯಕ್ಷ ಯಕ್ಷಿಯರ ವಿರಹಾವಸ್ಥೆಯ ವರ್ಣನೆ ಇದೆ. ವಿರಹಾವಸ್ಥೆಯಲ್ಲಿ ತಾಳಿ ಬಾಳುವ ಕಾಮವೇ ಧರ್ಮ ಅವಿರುದ್ಧ ಕಾಮವೆನಿಸಿ ಜೀವೋನ್ನತಿಯ ಹಾದಿಯಾಗುವದು. ಶಾಕುಂತಲದಲ್ಲಿಯೂ, ವಿಕ್ರಮೋರ್ವಶೀಯದಲ್ಲಿಯೂ ದುಷ್ಯಂತ ಪುರೂರವರ ವಿರಹ ವರ್ಣನೆ ರಮ್ಯವಾಗಿಯೇ ಬಂದಿದೆ. ಅವೆರಡು ವಿರಹದ ಮುಖಗಳು. ಮೇಘದೂತದಲ್ಲಿಯ ವಿರಹ ಕಾವ್ಯ ಬೇರೆ ಬಗೆಯದಾಗಿದೆ. ವಿರಹದಿಂದ ಯಕ್ಷನಲ್ಲಿ ವಿಕಾರದಲ್ಲಿಯೂ ವಿಕೃತಿಗೊಳ್ಳದ ಧೃತಿಗೆ ಅನುಕೂಲವಾದ ಭಾವಗಳ ಉದಯವಾಗಿದೆ. ಯಕ್ಷನ ಲಲಿತದಲ್ಲಿಯೇ ಒಂದು ಪ್ರಶಾಂತಿ ಇದೆ. ಒಂದು ಉದಾತ್ತತೆ ಇದೆ. ಅವನಿಗೆ ಕಂಡ ವಿಶ್ವದಲ್ಲಿ ಪಾಪ, ದೌರ್ಜನ್ಯಗಳಿಗೆ ನೆಲೆಯೇ ಇರುವಂತಿಲ್ಲ. ಅಥವಾ ಅದರ ಬಗ್ಗೆ ಅವನಿಗೆ ಉಪೇಕ್ಷೆ ಹುಟ್ಟಿದೆ. ತನ್ನ ದುರ್ದೈವದ ಬಗ್ಗೆಯಾಗಲಿ, ತನ್ನ ಒಡೆಯನ ಅತಿಕೋಪದ ಅವಿವೇಕದ ಬಗ್ಗೆ ಆಗಲಿ, ತನ್ನ ಸುತ್ತಲಿನ ಲೌಕಿಕದ ಸಾಮಾನ್ಯ ಜೀವನವನ್ನು ನೋಡಿಯೇ ಆಗಲಿ, ಅವನಿಗೆ ನಿಷ್ಠುರತೆ ಇಲ್ಲ.. ಕಾಮಿ ಯಕ್ಷ ವಿರಹದಿಂದ ಕವಿಯಾಗುವನು. ಅವನ ಕಣ್ಣು ಚೆಲುವಿಗೆ ಕಣ್ಣಾಗುವುದು. ಅವನ ಹೃದಯ ರಸಕ್ಕೆ

ನೆಲೆಯಾಗುವದು. ಕಾಳಿದಾಸ ಈ ಮನಃಪರಿಪಾಕವನ್ನು ಬಹು ರಮ್ಯವಾಗಿ ಧ್ವನಿಪೂರ್ಣವಾಗಿ ಚಿತ್ರಿಸಿದ್ದಾನೆ. ಧರ್ಮಾವಿರುದ್ಧವಾದ ಕಾಮದಲ್ಲಿ ಹುಟ್ಟಿದ ಕಾವ್ಯ ಭಕ್ತಿಯ ಸಂಕೇತವಾಗುವದು" ಎಂದು ತಿಳಿಸಿದ್ದಾರೆ.

**ಕಾಳಿದಾಸನ ಕಡಲ ಮುತ್ತು ಮಾಲೆ**

ಬೇಂದ್ರೆಯವರ ದಾಂಪತ್ಯದ ಸುಮಧುರ ರಸಲಹರಿಯಲ್ಲಿ ಒಂದಾದ 'ಮೇಘದೂತ' ಕಾವ್ಯದ ಮುತ್ತಿನ ಅನನ್ಯ ವಿವರವನ್ನು ಅವರ ಪುತ್ರ ವಾಮನ ಬೇಂದ್ರೆಯವರು 'ಶ್ರೀ ಬೇಂದ್ರೆಯವರ ಜೀವನ ಪರಿಚಯ' ಕೃತಿಯಲ್ಲಿ ಹೀಗೆ ಚಿತ್ರಿಸಿದ್ದಾರೆ:

"ಮದುವೆಯ ಹೊಸತರಲ್ಲಿ 'ಏನಾದರೂ ವಸ್ತ್ರ ಒಡವೆ ಬೇಕೇ?' ಎಂದು ತಂದೆಯವರು ತಾಯಿಯವರನ್ನು ಕೇಳಿದ್ದರಂತೆ. ಆಗ ನನ್ನ ತಾಯಿಯವರು 'ಏನೂ ಬೇಡಿ, ಸಾಧ್ಯವಾದಾಗ ಒಂದು ಮುತ್ತಿನ ಮಾಲೆ ಮಾಡಿಸಿದರೆ ಸಾಕು' ಎಂದಿದ್ದರಂತೆ. ಮುಂದೆ ತಂದೆಯವರು ಕಾಳಿದಾಸನ ಮೇಘದೂತವನ್ನು ಕನ್ನಡಕ್ಕೆ ಅನುವಾದಿಸಿದಾಗ

ಕಾಲಿದಾಸನ ಕಡಲ
ಮುತ್ತು ಮಾಲೆಯನಿತ್ತೆ
ಮುಡುಪನೊಪ್ಪಿದೆಯೆಂದು ಮುಕ್ತಳಾಗು
ಓ ಯಕ್ಷಿ, ಚೈತ್ಯಾಕ್ಷಿ
ಚೆನ್ನೆ, ಹೃದಯದ ಸಾಕ್ಷಿ
ನನ್ನ ಕಲ್ಯಾಣಕ್ಕೆ ಯುಕ್ತಳಾಗು

ಎಂದು ತಾಯಿಯವರಿಗೆ ಅದನ್ನು ಅರ್ಪಿಸಿದರಂತೆ. 'ಈ ಪುಸ್ತಕದ ಹಣ ಬಂದಾಗ ಮುತ್ತಿನ ಮಾಲೆ ಮಾಡಿಸಿಕೋ' ಎಂದರಂತೆ. ಅದಕ್ಕೆ ನನ್ನ ತಾಯಿಯವರು ಒಪ್ಪಿಬಿಟ್ಟರಂತೆ". ಹೀಗಿತ್ತು ಕವಿಯ ಸಂಸಾರ.

ಈ ಮಾತನ್ನು ಅನುಸರಿಸಿ ಒಂದು ಮುತ್ತಿನ ಮಾಲೆಯನ್ನು ತಂದೆಯವರು ಮಾಡಿಸಿದ್ದರಂತೆ. ಯಾವುದೋ ಒಂದು ಕ್ಷಣದಲ್ಲಿ ಆ ಮಾಲೆಯನ್ನು ಧಾರವಾಡದ ತಾಯಿ ದುರ್ಗಾದೇವಿಗೆ ಒಪ್ಪಿಸಲು ತಂದೆಯವರೇ ಹೇಳಿದರು. ತಾಯಿಯವರು ಒಪ್ಪಲಿಲ್ಲ. ಮುಂದೆ 1944ರಲ್ಲಿ ಎರಡು ಮಕ್ಕಳನ್ನು ಕಳೆದುಕೊಂಡಾಗ ಆ ಮುತ್ತಿನಮಾಲೆಯನ್ನು ಪಾಂಡಿಚೇರಿಯ ಶ್ರೀಮಾತೆಯವರಿಗೆ ಅರ್ಪಿಸಿದರಂತೆ. ಹೀಗಿದೆ ಈ ಮುತ್ತಿನ ಮಾಲೆಯ ವಿರಸದ ಕಥೆ. ಅನಂತರದಲ್ಲಿಯೂ ಒಂದು ಮುತ್ತಿನ ಮಾಲೆಯನ್ನು ತಂದೆಯವರು ಮಾಡಿಸಿದರು. ಅದನ್ನು ತಾಯಿಯವರು ಧರಿಸಿದ್ದನ್ನು ನಾನು ನೋಡಿದ್ದೇನೆ" (ಪುಟ 61).

**ವೇದವಿತ್ ಕವಿ**

'ನಾನು ನವೋದಯ ಕವಿ ನವ್ಯಕವಿ ಅಲ್ಲ,
ನಾನು ವೇದ ಕವಿ, ವೇದವಿತ್ ಕವಿ'

ಎಂದು ಬೇಂದ್ರೆಯವರು ತಮ್ಮ ಬಗ್ಗೆ ಹೇಳಿಕೊಂಡಿದ್ದಾರೆ. ಅವರ ಕಾವ್ಯ ಭಾರತೀಯ ಸಂಸ್ಕೃತಿಯ ಜೀವಕೋಶದಂತಿದೆ. ಅವರ ವೇದೋಪನಿಷತ್ತುಗಳ ಅಧ್ಯಯನದ ಸಾರದಂತೆ 'ಕನ್ನಡ ಮೇಘದೂತ'ದ ಪೀಠಿಕೆ ಇದೆ. ಅದನ್ನು ಕುರಿತು ಗೌರೀಶ ಕಾಯ್ಕಿಣಿಯವರು "ನವಿಲುಗರಿಯ ಬೀಸಣಿಕೆಗೆ ಚಿನ್ನದ ಕಟ್ಟಿನ ಹಸ್ತಿದಂತದ ಹಿಡಿಕೆಯಂತಿದೆ ಈ ಪೀಠಿಕೆಯ ಇಪ್ಪತ್ತನಾಲ್ಕು ಪದ್ಯಗಳು" ಎಂದು ಹೇಳಿದ್ದಾರೆ (ಇಳಿದು ಬಾ ತಾಯಿ, ಪುಟ 53).

ಪಂಡರೀನಾಥಾಚಾರ್ಯ ಗಲಗಲಿಯವರು 'ಕಾಳಿದಾಸ ಮತ್ತು ಬೇಂದ್ರೆ' (ಮೇಘದೂತದ ತೌಲನಿಕ ವಿವೇಚನೆ) ಲೇಖನದಲ್ಲಿ "ಒಂದೊಂದು ಸಲ, ಅದೇಕೆ, ಅನೇಕ ಸಲ, ಶ್ರೀ ಬೇಂದ್ರೆಯವರ ಅನುವಾದದ ಸೊಬಗು ಮೂಲದ ಮಾಧುರ್ಯವನ್ನು ಮೀರಿಸುವುದುಂಟು" ಎಂದು ವಿಮರ್ಶಿಸಿದ್ದಾರೆ (ಇಳಿದು ಬಾ ತಾಯಿ, ಪುಟ 375).

ಡಿ.ಎಸ್. ಕರ್ಕಿ ಅವರು 'ಬೇಂದ್ರೆಛಂದ' ಲೇಖನದಲ್ಲಿ 'ಕನ್ನಡ ಮೇಘದೂತ'ದ ಛಂದಸ್ಸಿನ ಆಂತರ್ಯವನ್ನು ಹೀಗೆ ಮಿಡಿದಿದ್ದಾರೆ: "ಕನ್ನಡ ಮೇಘದೂತಕ್ಕಾಗಿ ಬೇಂದ್ರೆ ಬಳಸಿದ ಛಂದೋಲಹರಿ ಕನ್ನಡದಲ್ಲಿ ಅವರ ಹೆಸರನ್ನೇ ತಳೆದು ನಿಂತಿದೆ. ಅದನ್ನು ಬೇಂದ್ರೆ ಛಂದವೆನ್ನಬಹುದು. ಅಷ್ಟೊಂದು ಸಂಬಂಧ ಬೇಂದ್ರೆಯವರಿಗೂ ಮತ್ತು ಛಂದೋಲಹರಿಗೂ. ಆ ಲಯ, ಕಿವಿಗೆ ಬಿದ್ದಾಗ ಕನ್ನಡ ಮೇಘದೂತದ ಸ್ಮರಣೆ ಮನಕ್ಕೆ ತಾನಾಗಿಯೇ ತೂರಿ ಬರುತ್ತದೆ. ಮಂದಾನಿಲ ಲಯದಲ್ಲಿ (3 । 5, 3 । 5, 3 । 5) ಪ್ರಭೇದ ಈ ಛಂದದಲ್ಲಿ ಒಂದು ಹೊಸ ಗಮಕದ ಗತ್ತನ್ನು ಎತ್ತಿ ತೋರುವಂತಿದೆ. ನಾಲ್ಕು ದೀರ್ಘ ಚರಣಗಳ ನಾದ ನಿನಾದದ ಈ ಮಟ್ಟು ಪದ್ಯವಾಗಿ ಪ್ರವಹಿಸುತ್ತಿದೆ. ಅದಕ್ಕೆ ಒಂದಿಷ್ಟು ಲಾವಣಿಯ ಲಾವಣ್ಯವೂ ಉಂಟು. ಕಥನ ಗೀತಕ್ಕಂತೂ ತುಂಬ ಸರಿ ಹೋಗುವ ಛಂದೋಗತಿಯಿದು. ಬೇಂದ್ರೆಯವರು ತಮ್ಮ ಗಾರುಡಿಯನ್ನೇ ಪ್ರಯೋಗಿಸುವಂತೆ ಇದನ್ನು ಅಲ್ಲಲ್ಲಿ ಬಳಸಿದ್ದಾರೆ. ಅವರ ಕನ್ನಡ ಮೇಘದೂತದಲ್ಲಂತೂ ಅದು ರಸಸಿದ್ಧಿಯನ್ನು ಕಂಡಿದೆ.ಆದುದರಿಂದಲೇ ಅದು 'ಬೇಂದ್ರೆ ಧಾಟಿ' ಎಂದು ಹೆಸರು ಪಡೆದುದುಂಟು" (ಇಳಿದು ಬಾ ತಾಯಿ, ಪುಟ 79).

ಎಚ್. ಎಸ್. ವೆಂಕಟೇಶಮೂರ್ತಿಯವರು ಇದುವರೆಗೆ ಕನ್ನಡದಲ್ಲಿ ಬಂದಿರುವ ಮೇಘದೂತದ ಅನುವಾದಗಳನ್ನು ಹೀಗೆ ದಾಖಲಿಸಿದ್ದಾರೆ: "ಮೇಘದೂತವನ್ನು ಭಾಗಶಃ ಅಥವಾ ಪೂರ್ತಿಯಾಗಿ ಕನ್ನಡಕ್ಕೆ ಅನುವಾದಿಸಿರುವವರಲ್ಲಿ ಶಾಂತಕವಿ, ವರದಾಚಾರ್ಯರು, ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಗಳು, ರೈನಾಪುರ, ಅಂಬಿಕಾತನಯದತ್ತ, ಪರಮೇಶ್ವರ ಭಟ್ಟ, ಅಗ್ರಹಾರ ನಾ. ಶರ್ಮ, ಪಿ. ಬಸವಣ್ಣ, ಗಣಪತಿ ಮೊಳೆಯಾರ, ಮೊದಲಾದವರ ಹೆಸರು ಹೇಳಬಹುದು. ಮಾಸ್ತಿಯವರು 'ಮೇಘಸಂದೇಶ' ಲೇಖನದಲ್ಲಿ ಉಲ್ಲೇಖನಾರ್ಥವಾಗಿ ಹತ್ತು ಪದ್ಯಗಳನ್ನು ಅನುವಾದಿಸಿ ಉಲ್ಲೇಖಿಸಿದ್ದಾರೆ. ಜಿ. ವಿಷ್ಣುಮೂರ್ತಿ ಭಟ್ಟರ ಮೇಘದೂತಮ್ ಕನ್ನಡ ವ್ಯಾಖ್ಯಾನವು ಮೂಲ ಕಾವ್ಯವನ್ನು ಸಂಸ್ಕೃತದಲ್ಲಿ ಅಷ್ಟಾಗಿ ಪ್ರವೇಶವಿಲ್ಲದವರು ಅರ್ಥ ಮಾಡಿಕೊಳ್ಳಲಿಕ್ಕೆ ವಿಶೇಷವಾಗಿ ಸಹಾಯವಾಗುವ ಗ್ರಂಥ" (ಬೇಂದ್ರೆ ಸಾಹಿತ್ಯ ಒಂದು ಅಧ್ಯಯನ, ಪುಟ 132).

ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು 'ಬೇಂದ್ರೆಯವರ ವ್ಯಕ್ತಿತ್ವ' ಲೇಖನದಲ್ಲಿ "ಶ್ರೀಮಾನ್ ಪು.ತಿ. ನರಸಿಂಹಾಚಾರ್ಯರು ಒಂದೆಡೆ ಹೇಳಿದಂತೆ "ಬೇಂದ್ರೆಯವರ ಕಾವ್ಯಗಳನ್ನು ವಿಮರ್ಶಿಸುವ ಕಾಲ ಹೋಯಿತು, ಇನ್ನು ಅವು ವ್ಯಾಖ್ಯಾನಕ್ಕೆ ತಕ್ಕವು" ಎಂಬುದು ನಿಜ" ಎಂದು ತಿಳಿಸಿದ್ದಾರೆ (ಕವಿವರ ಬೇಂದ್ರೆ, ಪುಟ 69).

ಟಿ.ಎನ್. ವಾಸುದೇವಮೂರ್ತಿ ಮತ್ತು ನಾನು ಹಲವಾರು ಸಲ ಭೇಟಿಯಾದಾಗ ದ.ರಾ. ಬೇಂದ್ರೆಯವರ 'ಕನ್ನಡ ಮೇಘದೂತ' ಕುರಿತು ಚರ್ಚಿಸುತ್ತಿದ್ದೆವು. ಅದನ್ನು ಸರಳ ಗದ್ಯಾನುವಾದದಲ್ಲಿ ಟಿಪ್ಪಣಿಗಳೊಡನೆ ನೀಡಿದರೆ ವಿದ್ಯಾರ್ಥಿಗಳಿಗೆ ಮತ್ತು ಕಾವ್ಯ ಸಹೃದಯರಿಗೆ ಹೆಚ್ಚು ಉಪಯುಕ್ತ ಎಂದುಕೊಂಡೆವು. ಅದೇ ಸಮಯಕ್ಕೆ ಸ್ನೇಹಿತ ಎ.ಕೆ. ರವಿಶಂಕರ ಅಂಬಿಕಾತನಯದತ್ತರ 'ಕನ್ನಡ ಮೇಘದೂತ'ದ ಮೊದಲ ಮುದ್ರಣ 1943ರ ಪ್ರತಿ ತಂದು ನೀಡಿ ಈ ಕೆಲಸ ಮುಂದುವರಿಯಲು ಸಹಾಯಕರಾದರು. ಅವರ ಬೇಂದ್ರೆ ಕಾವ್ಯ ಪ್ರೀತಿ ಮೆಚ್ಚುವಂತಹದು.

ಪಾಂಡುರಂಗ ಬೇಂದ್ರೆಯವರ ಪುತ್ರ ಪುನರ್ವಸು ಬೇಂದ್ರೆ ಅವರಿಗೆ ನಾನು 'ಕನ್ನಡ ಮೇಘದೂತ'ದ ವ್ಯಾಖ್ಯಾನವನ್ನು ಮಾಡುತ್ತಿರುವ ವಿಷಯ ತಿಳಿಸಿದೆನು. ಅವರಿಗೆ 'ಕನ್ನಡ ಮೇಘದೂತ'ದ ನುಡಿಗಳನ್ನು ಬಳಸಿಕೊಂಡು ಉದ್ಧರಿಸಿ ಸರಳ ಗದ್ಯದಲ್ಲಿ ಬರೆಯಲು ಅನುಮತಿ ಕೇಳಿದೆನು. ಅವರು "ಇದು ಅವಶ್ಯವಾಗಿ ಆಗಬೇಕಾಗಿದೆ ಮಾಡಿ, ನನ್ನ ಅನುಮತಿ ಇದೆ" ಎಂದು ಹೇಳಿದರು. ಹೀಗೆ ಈ ಬೇಂದ್ರೆ ಕಾವ್ಯ ಸೇವಾ ಕಾರ್ಯಕ್ಕೆ ಪ್ರೋತ್ಸಾಹ ನೀಡುತ್ತಿರುವ ಪುನರ್ವಸು ಬೇಂದ್ರೆ ಮತ್ತು ಶ್ರೀಮತಿ ಪದ್ಮ ಪಾಂಡುರಂಗ ಬೇಂದ್ರೆ ಅವರಿಗೆ ಹಾಗೂ ಬೇಂದ್ರೆ ಕುಟುಂಬಕ್ಕೆ ನಾನು ಋಣಿಯಾಗಿದ್ದೇನೆ.

ಈ ಕೃತಿಯನ್ನು ಅಧ್ಯಯನಮಾಡುವಾಗ ಉಂಟಾದ ಸಂಶಯಗಳನ್ನು ಆಚಾರ್ಯ ಮಲ್ಲೇಪುರಂ ಜಿ. ವೆಂಕಟೇಶ್ ಅವರೊಂದಿಗೆ ಚರ್ಚಿಸುತ್ತಿದ್ದೆವು. ಅವರು ತುಂಬು ಸಹನೆಯಿಂದ ನಮಗೆ ಮಾರ್ಗದರ್ಶನ ಮಾಡಿದ್ದಾರೆ. ಅವರಿಗೆ ನಮ್ಮ ನಮನಗಳು.

ಈ ಕೃತಿಯನ್ನು ಪ್ರಕಟಿಸುತ್ತಿರುವ ಶ್ರೀ ಪ್ರಕಾಶ್, ವಂಶಿ ಪ್ರಕಾಶನ ಅವರಿಗೆ, ಮುಖಪುಟ ವನ್ನು ರಚಿಸಿಕೊಟ್ಟ ಶ್ರೀ ಸಂತೋಷ್ ಶಶಿಹಿತ್ತಲು ಅವರಿಗೆ, ಅಕ್ಷರ ಜೋಡಣೆಗೆ ನೆರವಾದ ಶ್ರೀ ಎಚ್.ಕೆ. ಶರತ್ ಅವರಿಗೆ ಮತ್ತು ಸುಂದರವಾಗಿ ಮುದ್ರಿಸಿದ ಲಕ್ಷ್ಮೀ ಮುದ್ರಣಾಲಯದವರಿಗೆ ಮನಃಪೂರ್ವಕ ನಮನಗಳು.

ಈ ನಾಡಿನ ಕಾವ್ಯ ಸಹೃದಯರು ಈ ಕೃತಿಯನ್ನು ಪ್ರೀತಿಯಿಂದ ಸ್ವೀಕರಿಸಿ ಆಶೀರ್ವದಿಸಬೇಕೆಂದು ಪ್ರಾರ್ಥಿಸುವ,

**ಡಾ. ಜಿ. ಕೃಷ್ಣಪ್ಪ**

**ಡಾ. ಟಿ.ಎನ್. ವಾಸುದೇವಮೂರ್ತಿ**

ಶ್ರೀಪ್ಲವನಾಮ ಸಂವತ್ಸರದ ಉತ್ತರಾಯಣ ಗ್ರೀಷ್ಮ ಋತು,
ಆಷಾಢ ಮಾಸದ, ಶುಕ್ಲ ಪಕ್ಷದ ಪ್ರಥಮ ದಿವಸ
10-07-2021
ಶನಿವಾರ

``Nowadays everybody blames those who constantly look back to their past. It is said that so much looking back to the past is the cause of all India's woes. To me, on the contrary, it seems that the opposite is true. So long as they forgot the past, the Hindu nation remained in a state of stupor; and as soon as they have begun to look into their past, there is on every side a fresh manifestation of life. It is out of this past that the future has to be moulded; this past will become the future".

**- Swami Vivekananda,** *The Complete works, Vol. 4, page 324*

**"ಬೇಂದ್ರೆಯವರ ಕಾವ್ಯಗಳನ್ನು ವಿಮರ್ಶಿಸುವ ಕಾಲ ಹೋಯಿತು,**
**ಇನ್ನು ಅವು ವ್ಯಾಖ್ಯಾನಕ್ಕೆ ತಕ್ಕವು"**

**– ಪು.ತಿ.ನರಸಿಂಹಾಚಾರ್**

# ಪೀಠಿಕೆ

## ಅನಾದಿ ಕಾಮದ ಕ್ರಮ

1

**ಬ್ರಹ್ಮ-ಹೃದಯಲಿ ಜನಿಸಿದಿಚ್ಛೆ ಕೊನೆಗಾಣಲೆಂದು ಬಾಳಿ**
**ಕಂಡ ಕಡೆಗು ಶತರೂಪೆಯಲ್ಲಿ ಮಧು-ರೂಪ-ರೂಪತಾಳಿ॥**
**ಜಗದ ತಂದೆ-ತಾಯಿಯರ ಕಂದ ಅವತರಿಸೆ ಜೀವನಾಗಿ**
**ಬಂತು ಪೂರ್ವದಲ್ಲಿ, ದೇವ-ಕಾಮವೇ ಕಾಮ-ದೇವನಾಗಿ॥**

ಇದು ಋಗ್ವೇದದ ನಾಸದೀಯ ಸೂಕ್ತದಲ್ಲಿ ಬರುವ ಒಂದು ಮಂತ್ರದಿಂದ ಪ್ರೇರೇಪಿತವಾದ ಪದ್ಯವಾಗಿದೆ. ಆ ಮಂತ್ರ ಹೀಗಿದೆ:

**ಕಾಮಸ್ತದಗ್ರೇ ಸಮವರ್ತತಾಧಿ ಮನಸೋ ರೇತಃ ಪ್ರಥಮಂ ಯದಾಸೀತ್!**
**ಸತೋ ಬಂಧುಮಸತಿ ನಿರವಿಂದನ್ ಹೃದಿ ಪ್ರತೀಷ್ಯಾ ಕವಯೋ ಮನೀಷಾ!!**

[ಮನಸ್ಸಿನ ರೇತಸ್ಸಾದ (ಮೂಲ ಬೀಜ ಸ್ವರೂಪವಾದ) ಅದು (ಪರಮ ತತ್ವವು) ಮೊದಲು ಕಾಮದ ರೂಪದಲ್ಲಿ (ಬಯಕೆಯ ರೂಪದಲ್ಲಿ) ತನ್ನೊಳಗೆ ತಾನು ಸ್ಪಂದಿಸಿತು. (ಯಾವಾಗ ಈ ಸ್ಪಂದನವಾಯಿತೋ ಆಗ) ಕವಿಗಳು (ಅಂದರೆ ಋಷಿಗಳು) ಅಸತ್ಯದ ಒಡಲಿನಿಂದ ಸತ್ಯ ಹುಟ್ಟುವುದನ್ನು ತಮ್ಮ ಹೃದಯದಿಂದ ಅನುಭವಿಸಿದರು, ಬುದ್ಧಿಯಿಂದ

---

1 ಇದೇ ನಾಸದೀಯ ಸೂಕ್ತದಲ್ಲಿ ಮತ್ತೊಂದು ಮಂತ್ರವಿದೆ. ಅದು ಇಲ್ಲಿಗೆ ಅಪ್ರಸ್ತುತವಾದರೂ ಉಲ್ಲೇಖನೀಯ. ಆ ಮಂತ್ರವು "ದೇವರು ನಿಜವಾಗಿಯೂ ಸರ್ವಜ್ಞನೇ, ಸರ್ವಶಕ್ತನೇ, ಸರ್ವವ್ಯಾಪಿಯೇ' ಈ ಅಗಾಧ ಸೃಷ್ಟಿಯ ಮೂಲವನ್ನು ಅವನು ನಿಜವಾಗಿಯೂ ಅರಿತಿರುವನೇ?" ಎಂದು ಸಂದೇಹವನ್ನು ವ್ಯಕ್ತಪಡಿಸುತ್ತದೆ.

*ಇಯಂ ವಿಸೃಷ್ಟಿರ್ಯತ ಆಬಭೂವ ಯದಿ ವಾ ದಧೇ ಯದಿ ವಾ ನ!*
*ಯೋ ಅಸ್ಯಾಧ್ಯಕ್ಷಃ ಪರಮೇ ವ್ಯೋಮನ್ ಸೋ ಅಜ್ಗ ವೇದ ಯದಿ ವಾ ನ ವೇದ!!*

ಈ ಜಗತ್ತಿನಲ್ಲಿ ದೈವದ ಸರ್ವಜ್ಞತ್ವ, ಸರ್ವಶಕ್ತಿತ್ವಗಳನ್ನು ಸಂದೇಹಿಸುವ ಧರ್ಮಗ್ರಂಥವೇನಾದರೂ ಇದ್ದರೆ ಅದು ಪ್ರಾಯಶಃ ಋಗ್ವೇದವೊಂದೇ ಇರಬೇಕು. ಆ ಮಂತ್ರವನ್ನು ಕುವೆಂಪು ಹೀಗೆ ಅನುವಾದಿಸಿದ್ದಾರೆ:

*'ಎತ್ತಣಿಂದಾದುದೀ ವಿಸೃಷ್ಟಿ? ಅವನಿಂದಲೆ ಬಂದುದೊ ಮೇಣ್ ಅವನಿಂದಲ್ಲವೊ? ಆರು ಆ ಪರಮವ್ಯೋಮದ ಅಧ್ಯಕ್ಷನೊ ಅವನಿಗೆ ಮಾತ್ರವೆ ಅದು ಗೊತ್ತು: ಅಥವಾ ಅವನಿಗೂ ಅದು ಗೊತ್ತಿಲ್ಲವೊ ಏನೋ!" (ಗುರುವಿನೊಡನೆ ದೇವರಡಿಗೆ)*

(ಈ ಒಟ್ಟು ಪ್ರಕ್ರಿಯೆಯನ್ನು ಕುರಿತು) ಆಲೋಚಿಸಿದರು].

**ಕಂಡ ಕಡೆಗು ಶತರೂಪೆಯಲ್ಲಿ ಮಧು-ರೂಪ-ರೂಪತಾಳಿ॥**

ಬ್ರಹ್ಮ ತನ್ನ ಹೃದಯದಲ್ಲಿ ಜನಿಸಿದ ಇಚ್ಛೆ ಪೂರ್ತಿಯಾಗಬೇಕು ಎಂಬ ಉದ್ದೇಶದಿಂದ ಶತರೂಪೆಗೆ ಜನ್ಮ ನೀಡಿದ. ಈ ಶತರೂಪೆಗೆ ಸರಸ್ವತಿ, ಸಂಧ್ಯಾ, ಬ್ರಾಹ್ಮಿ ಮುಂತಾದ ಹೆಸರುಗಳಿವೆ. ತನ್ನ ಮಗಳನ್ನು ಕಂಡು ತಾನೇ ಮೋಹಗೊಂಡು ಅವಳನ್ನು ಭೋಗಿಸಲು ಮುಂದಾದ. ಶತರೂಪೆ ಬ್ರಹ್ಮನ ಕಾಮವಿಕಾರಕ್ಕೆ ಹೆದರಿ ನಾಲ್ಕೂ ದಿಕ್ಕಿಗೆ ಓಡಿದಳು. ಆದರೆ ಅವನು ಮಾತ್ರ ನಾಲ್ಕೂ ದಿಕ್ಕುಗಳಲ್ಲಿ ನಾಲ್ಕು ತಲೆಗಳನ್ನು ಸೃಷ್ಟಿಸಿಕೊಂಡು ಅವಳನ್ನು ಹಿಂಬಾಲಿಸತೊಡಗಿದ. ಅವಳು ಹಸುವಿನ ರೂಪ ತಳೆದಾಗ ಅವನು ಹೋರಿಯಾಗಿ ಅವಳನ್ನು ಕೂಡಿದ, ಅವಳು ಹೆಣ್ಣು ಕುದುರೆಯ ವೇಷ ಧರಿಸಿ ಕಣ್ಮರೆಯಾಗಲು ಪ್ರಯತ್ನಿಸಿದರೆ ಇವನು ಗಂಡು ಕುದುರೆಯಾಗಿ ಅವಳೊಡನೆ ಕೂಡಿದ. ಹೀಗೆ ಶತರೂಪೆ ಬೇರೆ ಬೇರೆ ಜೀವಜಾತಗಳ ಸ್ತ್ರೀರೂಪವನ್ನು ಧರಿಸಿದರೆ ಅವನು ಆಯಾ ಜೀವಜಾತಗಳ ಪುರುಷ ರೂಪ ಧರಿಸಿ ಸೃಷ್ಟಿಕ್ರಿಯೆಗೆ ಚಾಲನೆ ನೀಡಿದ. ಕೊನೆಗೆ ಅವಳು ಮನುಷ್ಯ ರೂಪ ಧರಿಸಿ ಊರ್ಧ್ವಮುಖವಾಗಿ ಓಡಲೆತ್ನಿಸಿದಾಗ ಅವನು ಊರ್ಧ್ವಮುಖವಾಗಿ ಐದನೆಯದೊಂದು ತಲೆಯನ್ನು ಸೃಷ್ಟಿಸಿಕೊಂಡು ಸ್ವಯಂಭೂ ಮನು ಎಂಬ ಮನುಷ್ಯನ ರೂಪ ಪಡೆದು ಅವಳನ್ನು ಕೂಡಿದ. ಮಾನುಷ ರೂಪದ ಸ್ವಯಂಭೂ ಮತ್ತು ಶತರೂಪೆಗೆ ಪ್ರಿಯವ್ರತ ಮತ್ತು ಉತ್ತಾನಪಾದರೆಂಬ ಇಬ್ಬರು ಗಂಡು ಮಕ್ಕಳೂ, ಆಕೂತಿ, ಪ್ರಸೂತಿ[1], ದೇವಹೂತಿ ಎಂಬ ಹೆಸರಿನ ಮೂವರು ಹೆಣ್ಣುಮಕ್ಕಳೂ ಜನಿಸಿದರು[2].

ಮನುಷ್ಯ ಸೃಷ್ಟಿಯೊಂದಿಗೆ ಬ್ರಹ್ಮನ ಹೃದಯದ ಇಚ್ಛೆ ಪೂರ್ಣಗೊಳ್ಳಬೇಕಿತ್ತು ಆದರೆ ಅವನ ಲೋಲುಪತೆಗೆ ಲಂಗು ಲಗಾಮಿರಲಿಲ್ಲ. ಬ್ರಹ್ಮನ ಈ ಕಾಮಪಿಪಾಸೆಯನ್ನು ಕಂಡು ಕೆರಳಿದ ಶಿವನು ಅವನ ಐದನೆಯ ತಲೆಯನ್ನು ಕತ್ತರಿಸುವ ಮೂಲಕ ಅವನ ಸೃಷ್ಟಿಕ್ರಿಯೆಗೆ ಒಂದು ಅಂತ್ಯ ಹಾಡಿದ. ಹೀಗೆ "ಬ್ರಹ್ಮ ಹೃದಯದಲಿ ಜನಿಸಿದಿಚ್ಛೆ" ಕೊನೆಗಂಡಿತು.

ಮಗಳನ್ನೇ ಕಾಮಿಸುವ ಬ್ರಹ್ಮನ ಈ ಲೋಲುಪತೆಗೆ ಹೇಸಿ ಭಾರತೀಯರು ಬ್ರಹ್ಮನನ್ನು ಪೂಜಿಸಲು ನಿರಾಕರಿಸಿದರು ಎನಿಸುತ್ತದೆ. ಅಥವಾ ಅದಕ್ಕೆ ಇನ್ನೊಂದು ಕಾರಣವೂ ಇದೆ. ಶಿವ ಮತ್ತು ವಿಷ್ಣು ಆದ್ಯಂತ ರಹಿತರು ಪರಿಪೂರ್ಣರು. ಬ್ರಹ್ಮನಿಗಾದರೂ ಒಂದು ಹುಟ್ಟು ಇದೆ. ಅವನು ವಿಷ್ಣುವಿನ ಹೊಕ್ಕುಳಿನ ಕಮಲದಿಂದ ಜನಿಸಿದವನು.

---

[1] ಈ ಪ್ರಸೂತಿ ಒಂದಾದ ಮೇಲೆ ಒಂದರಂತೆ ಇಪ್ಪತ್ತೆಂಟು ಹೆಣ್ಣು ಮಕ್ಕಳನ್ನು ಹಡೆದಳು. ಹೆರಿಗೆ ಮನೆಗೆ 'ಪ್ರಸೂತಿ ಗೃಹ' ಎಂಬ ಹೆಸರು ಇವಳಿಂದಲೇ ಬಂದಿರಬೇಕು.

[2] ಆಕರ: ಬ್ರಹ್ಮವೈವರ್ತ ಪುರಾಣ

ಆದ್ಯಂತಗಳಿರುವ ಕಾರಣ ಅವನು ಅಪೂರ್ಣನು. ಅಪೂರ್ಣತೆ ಪೂಜಾರ್ಹವಲ್ಲ ಎಂಬ ಕಾರಣದಿಂದಲೂ ನಾವು ಅವನನ್ನು ಪೂಜಿಸುತ್ತಿಲ್ಲದಿರಬೇಕು.

**ಜಗದ ತಂದೆ-ತಾಯಿಯರ ಕಂದ ಅವತರಿಸೆ ಜೀವನಾಗಿ[1]**

ಸ್ವಯಂಭೂ ಮನು ಮತ್ತು ಶತರೂಪೆಯರನ್ನೇ ಇಲ್ಲಿ ಕವಿ ಜಗದ ತಂದೆ ತಾಯಿಯರು ಎಂದು ಕರೆದಿದ್ದಾನೆ, ಶಿವಪಾರ್ವತಿಯರನ್ನಲ್ಲ. ಅದಕ್ಕೆ ಕಾರಣವಿದೆ:

1. ಷಣ್ಮುಖ ಪಾರ್ವತಿಗೆ ಜನಿಸಿದವನಲ್ಲ. ಪಾರ್ವತಿ ಶಿವನ ಪ್ರಖರ ತೇಜಸ್ಸಿನ ವೀರ್ಯವನ್ನು ಸ್ವೀಕರಿಸುವುದಿಲ್ಲ. ಆ ವೀರ್ಯದ ತೇಜಸ್ಸಿನಿಂದ ಸೃಷ್ಟಿಯೇ ನಾಶವಾಗಬಹುದೆಂಬ ಭಯದಿಂದ ಅಗ್ನಿದೇವನು ಆ ವೀರ್ಯವನ್ನು ಹೊತ್ತು ತಂದು ಗಂಗಾನದಿಗೆ ಹಾಕುತ್ತಾನೆ. ಅಲ್ಲಿ ಶಿಶುಜನನವಾಗುತ್ತದೆ. ಆರು ಮಂದಿ ಕೃತ್ತಿಕಾ ದೇವತೆಗಳು (ಶಿವಾ, ಸಂಭೂತಿ, ಪ್ರೀತಿ, ಸನ್ಮತಿ, ಅನಸೂಯಾ, ಕ್ಷಮಾ) ಆ ಶಿಶುವನ್ನು ತೆಗೆದುಕೊಂಡು ಪೋಷಿಸುತ್ತಾರೆ. ಆದ್ದರಿಂದಲೇ ಅವನಿಗೆ ಕಾರ್ತಿಕೇಯ ಎಂಬ ಹೆಸರು ಬಂದಿರುವುದು. ಆರು ಮಂದಿ ತಾಯಂದಿರನ್ನು ಸಮಾನವಾಗಿ ತೃಪ್ತಿಪಡಿಸುವ ಸಲುವಾಗಿ ಅವನು ಆರು ತಲೆಗಳನ್ನು ಸೃಷ್ಟಿಸಿಕೊಂಡು ಆರು ಮುಖಗಳಿಂದ ಅವರ ಎದೆಹಾಲು ಕುಡಿದ. ಬೇಂದ್ರೆಗೆ ತನಗೆ ಐವರು ತಾಯಂದಿರು ಎನ್ನಲು ಈ ಪೌರಾಣಿಕ ಕಥನವೂ ಅವರನ್ನು ಪ್ರೇರೇಪಿಸಿರಬಹುದು.

2. ಕಾಳಿದಾಸನ 'ಜಗತಃ ಪಿತರೌ ವಂದೇ ಪಾರ್ವತೀಪರಮೇಶ್ವರೌ' ಎಂಬ ಸಾಲಿನಲ್ಲಿ ಅವರು ಅಖಂಡ ಸೃಷ್ಟಿಯ ತಾಯ್ತಂದೆಯರು ಎಂಬ ಇಂಗಿತವಷ್ಟೇ ಇದೆ.

3. ಈ ಸಾಲು ಷಣ್ಮುಖನ ಹುಟ್ಟನ್ನು ಕುರಿತು ಪ್ರಸ್ತಾಪಿಸುತ್ತಿಲ್ಲ. ಜೀವರೂಪದ ಹುಟ್ಟನ್ನಷ್ಟೇ ಇದು ವಿವರಿಸುತ್ತಿದೆ. ಎಲ್ಲಕ್ಕಿಂತ ಮುಖ್ಯವಾಗಿ ಬ್ರಹ್ಮ-ಶತರೂಪೆಯರೇ ಜಗತ್ತಿನ ತಾಯ್ತಂದೆಯರು ಎಂದು ವ್ಯಾಖ್ಯಾನಿಸಿದಾಗ ಮಾತ್ರ ಈ ಪದ್ಯದ ವಿಶ್ಲೇಷಣೆಗೆ ಒಂದು ತಾರ್ಕಿಕ ಅಂತ್ಯ ಸಿಗುತ್ತದೆ.

**ಬಂತು ಪೂರ್ವದಲ್ಲಿ, ದೇವಕಾಮವೇ ಕಾಮ ದೇವನಾಗಿ ॥**

ಕವಿ ಬಳಸಿರುವ ದೇವಕಾಮ ಮತ್ತು ಕಾಮದೇವ ಎಂಬ ರೂಪಕಕ್ಕೆ ಶ್ರೀ ಅರವಿಂದರ 'ಸುಪ್ರಾ ಮೆಂಟಲ್ ಮ್ಯಾನಿಫೆಸ್ಟೇಷನ್' ಎಂಬ ಪರಿಕಲ್ಪನೆಯ ಪ್ರೇರೇಪಣೆ ಇರಬಹುದು. ಮುಂದೆ ಭವಿಷ್ಯದಲ್ಲಿ ಈ ಭೂಮಿಯ ಮೇಲೆ ದಿವ್ಯತ್ವದ ಅವತರಣವಾಗುತ್ತದೆ ಎಂಬುದು ಅರವಿಂದರ ನಂಬಿಕೆ. ಈ ನಂಬಿಕೆಯನ್ನು ಅನುಮೋದಿಸುವ ಉದ್ದೇಶದಿಂದ ಕವಿ

---

ಈ ಸಾಲಿನಲ್ಲಿ
ವಾಗರ್ಥಾವಿವ ಸಂಪೃಕ್ತೌ ವಾಗರ್ಥ ಪ್ರತಿಪತ್ತಯೇ ।
ಜಗತಃ ಪಿತರೌ ವಂದೇ ಪಾರ್ವತೀಪರಮೇಶ್ವರೌ ॥ (ಕುಮಾರ ಸಂಭವ 1.1)
ಎಂಬ ಕಾಳಿದಾಸನ ಪದ್ಯದ ಛಾಯೆ ಇದೆ.

"ಹಿಂದೆ ಪೂರ್ವಕಾಲದಲ್ಲಿ ದಿವ್ಯತ್ವವೇ (ದೇವಕಾಮವೇ) ಕಾಮದೇವನಾಗಿ ಬಂದಿತ್ತು" ಎನ್ನುತ್ತಿದ್ದಾನೆ.

2

**ರತಿಯನಗಲಿಸಿದರಯ್ಯೊ ಪಾಪಿಗಳು ಕಾಮನನ್ನು ರಮಿಸಿ**
**ಶಿವನ ನೇತ್ರಕಾಹುತಿಯ ಕೊಟ್ಟರೋ ಒಳಿತು ತಪ್ಪ ಕ್ಷಮಿಸಿ ॥**
**ರತಿಯ ವಿರಹದಲಿ ಬೆಂದ ಕಾಮ; ಎಚ್ಚತ್ತ ಭೂತಪತಿಯು**
**ಸತಿಯ ಸರ್ವ–ಮಾಂಗಲ್ಯಕಾಗಿ ಅಳಬೇಕೋ, ಪಾಪ! ರತಿಯು ॥**

ತಾರಕನ ಸಂಹಾರಕ್ಕಾಗಿ ತಪೋಮಗ್ನನಾಗಿದ್ದ ಶಿವನನ್ನು ಎಚ್ಚರಿಸಿ ಪಾರ್ವತಿಯ ಕಡೆಗೆ ಅವನ ಮನಸ್ಸು ಹರಿಯುವಂತೆ ಮಾಡಬೇಕಿತ್ತು. ತಮ್ಮ ಈ ಉದ್ದೇಶವನ್ನು ನೆರವೇರಿಸಿಕೊಳ್ಳಲು ದೇವತೆಗಳು ಕಾಮನನ್ನು ರಮಿಸಿದರು[1], ಅಂದರೆ ಪುಸಲಾಯಿಸಿ ಅವನನ್ನು ಒಪ್ಪಿಸಿದರು[2].

**ಶಿವನ ನೇತ್ರಕಾಹುತಿಯ ಕೊಟ್ಟರೋ ಒಳಿತು ತಪ್ಪ ಕ್ಷಮಿಸಿ ॥**

ಅವನು ಶಿವನನ್ನು ಪ್ರಚೋದಿಸಲು ಹೋಗಿ ಅವನ ಮೂರನೆಯ ಕಣ್ಣಿನ ಬೆಂಕಿಗೆ ಆಹುತಿಯಾದ, ತನ್ನ ಮಡದಿ ರತಿಯಿಂದ ಬೇರಾದ. ಆದರೆ ಕಾಮ ಬೆಂದಿದ್ದು ಶಿವನ ಮೂರನೆಯ ಕಣ್ಣಿನಿಂದಲ್ಲ, ತನ್ನ ಮಡದಿಯ ವಿರಹದಿಂದ ಬೆಂದ ಎಂದು ಕವಿ ಮೇಲಿನ ಪದ್ಯದಲ್ಲಿ ಹೇಳಿದ್ದಾರೆ. ರತಿಯೊಡನೆ ಭೋಗದಲ್ಲಿ ಮುಳುಗಿರುವಷ್ಟೂ ಕಾಲ ಕಾಮ ಪಕ್ವವಾಗುವುದಿಲ್ಲ. ರತಿಯಿಂದ ದೂರವಾಗಿ ಬೆಂದಾಗ, ಅಂದರೆ ತಪೋನಿರತವಾದಾಗ ಕಾಮ ಪಕ್ವವಾಗುತ್ತದೆ.

**ಸತಿಯ ಸರ್ವ–ಮಾಂಗಲ್ಯಕಾಗಿ ಅಳಬೇಕೋ, ಪಾಪ! ರತಿಯು ॥**

ಪಾರ್ವತಿಗೆ ಒಳ್ಳೆಯದಾಗಬೇಕೆಂಬ ಕಾರಣಕ್ಕೆ, ಪಾಪ, ರತಿ ಅಳಬೇಕಾಯಿತಲ್ಲ. ಸರ್ವ ಮಾಂಗಲ್ಯವಾಗಬೇಕೆಂದರೆ ಭೋಗ ಒಂದಿಷ್ಟು ದುಃಖಿಸಲೇ ಬೇಕಾಗುತ್ತದೆ. ಆದರೆ ಆ ದುಃಖ ಶಾಶ್ವತವಲ್ಲ. ಮುಂದೆ ಶಿವ ಅವಳ ಪಾಲಿಗೆ ಅವಳ ಗಂಡ ಮನ್ಮಥನನ್ನು ಬದುಕಿಸುತ್ತಾನೆ.

---

[1] "ತ್ವಂ ತು ಸರ್ವತೋಗಾಮಿ ಚ ಸಾಧಕಂ ಚ" (ನೀನು ಎಲ್ಲೆಡೆಯೂ ಹೋಗಬಲ್ಲವನು, ಎಲ್ಲವನ್ನೂ ಸಾಧಿಸಬಲ್ಲವನು) ಕುಮಾರ ಸಂಭವ 3ನೇ ಸರ್ಗ.

[2] ಆತ್ಮಾನಮಾಘಾಯ ಮಧು ಜಜೃಂಭೇ (ಆತ್ಮವನ್ನೇ ಬಲಿದಾನ ನೀಡಿ ನನಗೆ ವಹಿಸಿದ ಕೆಲಸವನ್ನು ನೆರವೇರಿಸುತ್ತೇನೆ) ಕುಮಾರ ಸಂಭವ 3ನೇ ಸರ್ಗ.

3

**ವಿರಹಪೂತರತಿ ಜೀವಮೂಲ ಸತಿ ಚಿತ್ತರಂಗದಲ್ಲಿ**
**ಸಾಂಗವಾಗಿ ಮೈಗೂಡಿಕೊಂಡಳೋ ಆ ಅನಂಗನಲ್ಲಿ ॥**
**ಋತುವಿನೊಂದು ಪ್ರೇರಣೆಗೆ ಕೂಡುವದು ಬಲ್ಲದೇನು ಪಶುವು?**
**ಪ್ರೌಢರತಿಯ ಕೈಕೂಸು ಆಗಿ ಬೆಳೆದಿಹುದು ಕಾಮ-ಶಿಶುವು ॥**

ಕಾಮನಿಗೆ 'ಮನಸಿಜ'ನೆಂಬ ಹೆಸರಿದೆ. ಮನಸಿಜನೆಂದರೆ ಮನಸ್ಸಿನಲ್ಲಿ, ಚಿತ್ತರಂಗದಲ್ಲಿ ಜನಿಸುವವನು. ರತಿ ಅಥವಾ ಸುಖಾಪೇಕ್ಷೆ (ವಿರಹಪೂತರತಿ) ಚಿತ್ತರಂಗದಲ್ಲಿ ಅನಂಗನನ್ನು ಸೇರುತ್ತಾಳೆ.

**ಸಾಂಗವಾಗಿ ಮೈಗೂಡಿಕೊಂಡಳೋ ಆ ಅನಂಗನಲ್ಲಿ ॥**

ಇವಳು ಕೇವಲ ಸುಖಾಪೇಕ್ಷೆಯ ಇನ್ನೊಂದು ಹೆಸರಲ್ಲ, ಆಳದಲ್ಲಿ ಇವಳು ವಿರಹದಿಂದ ಕೂಡಿದವಳಾಗಿದ್ದಾಳೆ, ಜೀವಮೂಲವಾಗಿದ್ದಾಳೆ.

**ಪ್ರೌಢರತಿಯ ಕೈಕೂಸು ಆಗಿ ಬೆಳೆದಿಹುದು ಕಾಮ-ಶಿಶುವು ॥**

ಮನುಷ್ಯನೊಳಗೆ ಈ ವಿರಹಪೂತ ರತಿ ಪ್ರೌಢರತಿಯಾಗಿ ಪರಿಣಮಿಸುತ್ತಾಳೆ. ಮನುಷ್ಯನೊಳಗೆ ಕಾಮ ಜೀವೋತ್ಪತ್ತಿಗಷ್ಟೇ ಪ್ರೇರಣೆಯಾಗದೇ ಪರಮಸತ್ಯದ ಸಾಕ್ಷಾತ್ಕಾರಕ್ಕೂ ಪ್ರೇರಣೆಯಾಗುತ್ತದೆ. ಅನಂಗನಾದ ಕಾಮ ಒಂದು ಶಿಶುರೂಪವನ್ನು ತಳೆದು ಬೆಳೆಯುತ್ತದೆ. ಅರವಿಂದರು ಹೇಳುವ ಅಲೌಕಿಕ ಪ್ರಜ್ಞೆ ಮನುಷ್ಯನೊಳಗೆ ಅವತರಣವಾಗುತ್ತದೆ.

ರತಿ-ಕಾಮರ ಏಕತೆಯನ್ನಾಗಲಿ ಅಥವಾ ವಿರಹವನ್ನಾಗಲಿ ಅರಿಯದ ಪಶುಗಳು ಋತುವಿನ ಪ್ರೇರಣೆಗೆ ಒಳಗಾಗಿ ಕೂಡುತ್ತವೆ, ಜೀವ ಸೃಷ್ಟಿಯಲ್ಲಿ ತೊಡಗುತ್ತವೆ. ರತಿ-ಕಾಮರೇ ಗಂಡು ಹೆಣ್ಣು ದೇಹಗಳೊಳಗೆ ಸಾಂಗವಾಗಿ ಮೈಗೂಡಿ ಸೃಷ್ಟಿಕ್ರಿಯೆ ನಡೆಸುತ್ತವೆ.

4

**ತನ್ನ ಕಿಚ್ಚಿನೊಳೆ ಬೆಂಕಿ ಸುಟ್ಟು ಬೆಳಕಾಗಿ ಮಿಂಚಬಹುದು**
**ಮೂಲ ಕಾಮದಲಿ ವಿರಹ ಬೆಳೆದು ಸುಪ್ರೇಮವರಳಲಹುದು ॥**
**ಜನ್ಮಜಾತ ಕುತುಕಕ್ಕೆ ರಮ್ಯ ತವನಿಧಿಯ ಹಾಗೆ ಭವ್ಯ**
**ಸತ್ಯಕಾಗಿ ನೀರಡಿಸಿ ನಿಂತ ಸೌಂದರ್ಯದಂತೆ ದಿವ್ಯ ॥**

ಬೆಂಕಿ ಅನ್ಯವಸ್ತುಗಳನ್ನು ಸುಡುತ್ತಿರುವವರೆಗೂ ಅದು ಮೂಲಪ್ರಕೃತಿಯ ಒಂದು ರೂಪವಾಗಿರುತ್ತದೆ. ತನ್ನನ್ನೇ ತಾನು ಸುಟ್ಟುಕೊಂಡಾಗ ಅದು ಪ್ರಕೃತಿಯ ಸೆರೆಯಿಂದ ಬೇರ್ಪಟ್ಟು ಲಯವಾಗುತ್ತದೆ. ಅಂದರೆ ಆತ್ಮ ಅನ್ಯವಸ್ತುಗಳನ್ನು ಅರಿಯುತ್ತಿರುವವರೆಗೂ ಅದು ಪ್ರಕೃತಿಯ ಒಂದು ಪ್ರೇರಣೆಗೆ ಒಳಗಾಗಿ ವರ್ತಿಸುತ್ತಿರುತ್ತದೆ. ತನ್ನನ್ನೇ ತಾನು ಅರಿತಾಗ ಅದು ಪ್ರಕೃತ್ಯತೀತವಾಗುತ್ತದೆ. ಅಂತರಂಗದ ಬೆಳಕಾಗುತ್ತದೆ.

**ಮೂಲ ಕಾಮದಲಿ ವಿರಹ ಬೆಳೆದು ಸುಪ್ರೇಮವರಳಲಹುದು ॥**

ಎರಡು ಜೀವಗಳ ಸೇರುವಿಕೆಯಿಂದ ಮೂಲಕಾಮ ತಣಿಯುತ್ತದೆ. ಇಂತಹ ಮೂಲಕಾಮದಲ್ಲಿಯೂ ವಿರಹ ಮೂಡಿದಾಗ ಅದು ಸುಪ್ರೇಮವಾಗಿ ಅರಳುತ್ತದೆ. ಮೂಲಕಾಮದಲ್ಲಿ ವಿರಹ ಬೆಳೆಯುವುದೆಂದರೆ ಕಾಮ ತಣಿವನ್ನು ನೀಡುವುದಿಲ್ಲ, ದಾಹವನ್ನು ಇನ್ನಷ್ಟು ಹೆಚ್ಚಿಸುತ್ತದೆ ಎಂಬ ವಿವೇಕ ಮೂಡಿದಾಗ ವ್ಯಕ್ತಿ ಕಾಮದಿಂದ ಬಿಡುಗಡೆ ಹೊಂದುತ್ತಾನೆ. ಕಾಮದಲ್ಲಿ ವಿರಕ್ತಿ ಹೊಂದುತ್ತಾನೆ. ಆಗ ಕಾಮದಂತೆ ಪ್ರಕೃತಿಯ ಪ್ರೇರಣೆಗೆ ಒಳಪಡದ, ಪ್ರಕೃತ್ಯತೀತವಾದ ಪ್ರೇಮ ಅವನಲ್ಲಿ ಅರಳಲು ಅವಕಾಶವಾಗುತ್ತದೆ.

**ಜನ್ಮಜಾತ ಕುತಕಕ್ಕೆ ರಮ್ಯ ತವನಿಧಿಯ ಹಾಗೆ ಭವ್ಯ**
**ಸತ್ಯಕಾಗಿ ನೀರಡಿಸಿ ನಿಂತ ಸೌಂದರ್ಯದಂತೆ ದಿವ್ಯ ॥**

ಹೀಗೆ ಕಾಮದಿಂದ ವಿರಕ್ತಿ ಹೊಂದಿದವನು ಮತ್ತೆ ಕಾಮ ಪಿಪಾಸೆ ಅಂದರೆ ಕಾಮದ ದಾಹ ಹೊಂದುವುದಿಲ್ಲ. ಅವನಲ್ಲಿ ಸತ್ಯದ ನೀರಡಿಕೆ ಹುಟ್ಟುತ್ತದೆ. ಸತ್ಯಕ್ಕಾಗಿ ಕಾತರಿಸುವವನು ದಿವ್ಯ ಸೌಂದರ್ಯದ ಸಾಕಾರ ರೂಪಿಯಾಗುತ್ತಾನೆ. ಈ ಸತ್ಯದ ದಾಹ ಜನ್ಮಜಾತ ಕೌತುಕವೂ ಹೌದು, ಎಂದಿಗೂ ಬತ್ತದ ಭವ್ಯವಾದ ತವನಿಧಿಯೂ ಹೌದು. ಇದನ್ನು ಬೇಂದ್ರೆ ಮತ್ತೊಂದು ಕಡೆ ಹೀಗೆಂದಿದ್ದಾರೆ:

**ಕಾಮದೊಳಗೆ ಹೂತಿದೆ ಪ್ರೇಮಾ**
**ಅದಕ್ಕಾವ ನೇಮಾ-ಗೀಮಾ**
**ಅದು ಬಾಳೋ ಸೀಮಾ ನಿತ್ಯಾನಂದ ಧಾಮಾ**
**(ಶ್ರೀಗುರುವರೇಣ್ಯ: ಮತ್ತೆ ಬಂತು ಶ್ರಾವಣ)**

ಸತ್ಯಮುಖಿಯಾದ ಯಕ್ಷ, ಸೌಂದರ್ಯನಿಧಿಯಾದ ಯಕ್ಷಿ ಇವರು ಉತ್ತಮ ದಾಂಪತ್ಯಕ್ಕೆ ಸಾಕ್ಷಿಯಾಗಿ ಈ ಕಾವ್ಯದಲ್ಲಿದ್ದಾರೆ. ಈ ಕಾವ್ಯ ಸತ್ಯ ಸೌಂದರ್ಯಗಳ ಒಗ್ಗೂಡುವಿಕೆಯನ್ನು ಸಾರುತ್ತಿದೆ.

5

**ಅನ್ನ ಪ್ರಾಣಗಳ ಮಿಥುನದಂತೆ ಮೈ ಎರಡು ಕಲೆತು ಬೆರೆತು**
**ಮನದ ಕಾವಿನಲಿ ಕಾಮವಾಗಿ ಮನದಾಚೆಗೇನೋ ಅರಿತು ॥**
**ಚಿತ್ತದಲ್ಲಿ ನಿಷ್ಕಾಮರತಿಯು ರಸಪಾಕವಾಗಿ ನಿಂತು**
**ಧಾರೆಗೆಡದೆ ಭಗವಂತನಲ್ಲಿ ಚಿರಭಕ್ತಿಯಾಗಿ ಬಂತು ॥**

ಈ ಸ್ನೇಹಾನುರಾಗವು ಅನ್ನ ಪ್ರಾಣಗಳ ಮಿಥುನದಂತಿದೆ. ಮೈ ಎರಡು ಕಲೆತು ಬೆರೆತಿವೆ! ಒಲುಮೆ ಜಲದ ಘನರಸದ ಕಾವಿನಲ್ಲಿ ಕಾಮವಾಗಿ ಕುದಿಗೊಂಡಿದೆಯಾದರೂ

ಮನದಾಚೆಗೆ ಏನೋ ಅರಿತಂತೆ ಒಳಗೊಳಗೆ ಬೆಳಗುತ್ತದೆ. ಅದು ಚಿತ್ತದಲ್ಲಿ ನಿಷ್ಕಾಮ ರತಿಯು ರಸಪಾಕವಾಗಿ ನಿಂತ ಅನುಭವ. ಕಾಮವಿಲ್ಲದ ಕೇವಲ ರತಿಯು ಆತ್ಮರತಿಯಾಗಿದೆ. ಆತ್ಮಜ್ಞಾನವಾಗಿದೆ. ಅದರ ಗೂಢವನ್ನು ಅರಿಯಲಾಗದಾದರೂ ಅದು ರಸಪ್ರವಾಹವಾಗಿ ಹರಿದು ಅನಂತ ಶಕ್ತನಲ್ಲಿ ಚಿರಭಕ್ತಿಯಾಗಿ ಅಭಿವ್ಯಕ್ತವಾಗುತ್ತದೆ.

6

**ಬ್ರಹ್ಮದಿಂದ ಅಗಲಿಸಿತು ಮಾಯೆ ಆ ಬ್ರಹ್ಮಕದುವೆ ಸೇತು**
**ಬೀಜವೊಡೆಯೆ, ಆ ಬೀಜ ಪಡೆಯೆ ಬರುವಂತೆ ಬೀಜ ಹೂತು**
**ಇಹುದು ಎಂದರದು ಅಹುದು ಇದಿರು; ಇದು ಅಲ್ಲವೆಂದರಿಲ್ಲ**
**ದೇವಮಾಯೆ ಅದರಾಟ ಮಾಟಗಳ ಬಲ್ಲನೊಬ್ಬ ಬಲ್ಲ**

ಈ ಪದ್ಯದಲ್ಲಿ ಆದಿಶಂಕರರ ಮಾಯಾವಾದದ ವಿಮರ್ಶೆ ಇದೆ. ಶಂಕರರ ಪ್ರಕಾರ ಮನುಷ್ಯ ಆಂತರ್ಯದಲ್ಲಿ ಬ್ರಹ್ಮಸ್ವರೂಪಿಯಾಗಿದ್ದಾನೆ. ಆದರೆ ಮಾಯಾವಶದಿಂದ ಅವನು ತಾನು ಬ್ರಹ್ಮನಿಗಿಂತ ಪ್ರತ್ಯೇಕನಾಗಿದ್ದೇನೆ, ಶರೀರವಾಗಿದ್ದೇನೆ ಎಂಬ ಅಜ್ಞಾನದಲ್ಲಿ ಬದುಕುತ್ತ ದುಃಖ ಅನುಭವಿಸುತ್ತಿದ್ದಾನೆ. ಇದುವೆ ಆದಿಶಂಕರರ ಮಾಯಾವಾದವಾಗಿದೆ.

**ಬ್ರಹ್ಮದಿಂದ ಅಗಲಿಸಿತು ಮಾಯೆ**

ಜ್ಞಾನಮಾರ್ಗದಲ್ಲಿ ಸತ್ಯ ಮತ್ತು ಸುಳ್ಳು ಎಂಬ ಎರಡು ವಸ್ತುಗಳಿರಲು ಸಾಧ್ಯ. ಆದರೆ ಶಂಕರ ಮಾಯೆ ಎಂಬ ಮೂರನೆಯದೊಂದು ವಸ್ತುವನ್ನು ಪ್ರತಿಪಾದಿಸುತ್ತಾರೆ. ಮಾಯೆ ಎಂಬುದು ಅತ್ತ ಸತ್ಯವೂ ಅಲ್ಲ, ಇತ್ತ ಸುಳ್ಳೂ ಅಲ್ಲ. ಕತ್ತಲೆಯಲ್ಲಿ ನಡೆಯುವವನು ಹಾದಿಯಲ್ಲಿ ಬಿದ್ದಿರುವ ಹಗ್ಗವನ್ನು ಕಂಡು ಹೆದರಿ ಹೌಹಾರುತ್ತಾನೆ, ಬೆವರಿ ಕಂಪಿಸುತ್ತಾನೆ. ಅನಂತರ ಪರಿಶೀಲಿಸಿ ನೋಡಲಾಗಿ ಅದು ಹಾವಲ್ಲ ಹಗ್ಗವೆಂದು ತಿಳಿದು ಸಮಾಧಾನ ಹೊಂದುತ್ತಾನೆ. ಈ ಸನ್ನಿವೇಶದಲ್ಲಿ ಅವನು ಹಾವನ್ನು ಕಂಡಿದ್ದು ಸುಳ್ಳಲ್ಲ. ಸುಳ್ಳಾಗಿದ್ದರೆ ಅವನು ಹೆದರಿ ಹೌಹಾರಿದ್ದು, ಮೈಯೆಲ್ಲಾ ಬೆವರಿ ಕಂಪಿಸಿದ್ದು ಎಲ್ಲವೂ ಸುಳ್ಳು ಎಂದು ತೀರ್ಮಾನಿಸಬೇಕಾಗುತ್ತದೆ. ಹಾಗಲ್ಲದೇ ಅವನು ಹಾವನ್ನು ಕಂಡಿದ್ದು ಸತ್ಯವೂ ಅಲ್ಲ. ಏಕೆಂದರೆ ಅದು ಹಾವೇ ಅಲ್ಲ ಎಂದು ಆಮೇಲೆ ಅವನಿಗೇ ಗೊತ್ತಾಗುತ್ತದೆ. ಹಾಗಾಗಿ ಲೋಕದಲ್ಲಿ ಸತ್ಯ ಮತ್ತು ಸುಳ್ಳು ಎಂಬ ಎರಡು ತತ್ವಗಳಿಲ್ಲ. ಆ ಎರಡರ ಮಧ್ಯೆ ಸತ್ಯವೂ ಅಲ್ಲದ, ಸುಳ್ಳೂ ಅಲ್ಲದ ಮೂರನೆಯದೊಂದು ತತ್ವವಿದೆ ಎಂಬುದು ಶಂಕರರ ಅಭಿಪ್ರಾಯ. ಇದುವೆ ಶಂಕರರ ಮಾಯಾವಾದ.

ಈ ಹಿನ್ನೆಲೆಯಲ್ಲಿ ನಾವು ಮಾಯೆಯ ಕಾರಣದಿಂದಾಗಿ ಬ್ರಹ್ಮನಿಂದ ಅಗಲಿದ್ದೇವೆ ಎನ್ನುವಲ್ಲಿ ಅಸಲಿಗೆ ನಾವು ಅಗಲಿಯೇ ಇಲ್ಲ ಎಂದು ಭಾವಿಸಬೇಕಾಗುತ್ತದೆ.

### ಆ ಬ್ರಹ್ಮಕದುವೆ ಸೇತು

ಮಾಯೆಯಿಂದ ಬ್ರಹ್ಮನನ್ನು ಅಗಲಿರುವ ಕಾರಣ ಪುನಃ ಬ್ರಹ್ಮನನ್ನು ಸೇರಬೇಕೆಂದರೆ ಮಾಯೆಯ ಮೂಲಕವೇ ಸೇರಬೇಕಾಗುತ್ತದೆ. ನಮ್ಮನ್ನು ಈ ಬದಿಗೆ ಕರೆತಂದ ಸೇತುವೆಯೇ ನಮ್ಮನ್ನು ಆ ಬದಿಗೂ ತಲುಪಿಸುತ್ತದೆ.

### ಬೀಜವೊಡೆಯೆ, ಆ ಬೀಜ ಪಡೆಯೆ ಬರುವಂತೆ ಬೀಜ ಹೂತು

ಛಾಂದೋಗ್ಯ ಉಪನಿಷತ್ತಿನ ಉದ್ದಾಲಕ ಮತ್ತು ಶ್ವೇತಕೇತುವಿನ ನಡುವೆ ನಡೆದ ಸಂಭಾಷಣೆ (6.1.3) ಈ ಸಾಲಿಗೆ ಪ್ರೇರಣೆ ನೀಡಿರಬಹುದು

### ಇಹುದು ಎಂದರದು ಅಹುದು ಇದಿರು; ಇದು ಅಲ್ಲವೆಂದರಿಲ್ಲ

ಅದು ಇದೆ ಎಂಬ ಮಾತೂ ಸತ್ಯ ಇಲ್ಲ ಎಂಬ ಮಾತೂ ಸತ್ಯ. ಏಕೆಂದರೆ ಅದು ಎಲ್ಲ ವೈರುದ್ಧ್ಯಗಳನ್ನೂ ಒಳಗೊಂಡಿರುವ ತತ್ವವಾಗಿದೆ. ಆ ವೈರುದ್ಧ್ಯವನ್ನು ಈಶಾವಾಸ್ಯ ಉಪನಿಷತ್ತು ಈ ರೀತಿಯಲ್ಲಿ ಬಣ್ಣಿಸುತ್ತದೆ:

**ತದೇಜತಿ, ತನ್ನೈಜತಿ,**
**ತದ್ದೂರೇ ತದ್ವಂತಿಕೇ ।**
**ತದಂತರಸ್ಯ ಸರ್ವಸ್ಯ,**
**ತದು ಸರ್ವಸ್ಯಾಸ್ಯ ಬಾಹ್ಯತಃ ॥ 5॥**

ಅದು ಚಲಿಸುತ್ತದೆ (ಎಂಬ ಮಾತೂ ಸತ್ಯ), ಅದು ಚಲಿಸುವುದಿಲ್ಲ (ಎಂಬ ಮಾತೂ ಸತ್ಯ), ಅದು ದೂರವಿರುವುದೂ ಹೌದು, ಹತ್ತಿರವಿರುವುದೂ ಹೌದು. ಅದು ಹೊರಗಿದೆ ಎಂಬ ಮಾತೂ ನಿಜ, ಒಳಗಿದೆ ಎಂಬ ಮಾತೂ ನಿಜ.

### ದೇವಮಾಯೆ ಅದರಾಟ ಮಾಟಗಳ ಬಲ್ಲನೊಬ್ಬ ಬಲ್ಲ

ಶಂಕರರು ಯಾವುದನ್ನು ಮಾಯೆ ಎಂದು ಕರೆದರೋ ಅದನ್ನು ಬೇಂದ್ರೆ ಕೇವಲ ಮಾಯೆ ಎನ್ನದೇ ದೇವಮಾಯೆ ಎಂದು ಕರೆಯುತ್ತಿದ್ದಾರೆ. ಇದರ ಆಟಮಾಟಗಳನ್ನು 'ಬಲ್ಲನೊಬ್ಬ ಬಲ್ಲ'. ಮನುಷ್ಯನೊಳಗೆ ಒಬ್ಬ ವ್ಯಕ್ತಿ ಇಲ್ಲ, ಹಲವು ವ್ಯಕ್ತಿಗಳಿದ್ದಾರೆ. ಪ್ರತಿ ಕ್ಷಣವೂ ಆ ವ್ಯಕ್ತಿಗಳು ಬದಲಾಗುತ್ತಿರುತ್ತಾರೆ, ಮನೋವೃತ್ತಿಗಳು ಬದಲಾಗುತ್ತಿರುತ್ತವೆ. ಹಲವರು ತೊಲಗಿ ಒಬ್ಬನೇ ಉಳಿದಾಗ, ಹಲವು ಚಿತ್ತವೃತ್ತಿಗಳು ತೊಲಗಿ ಒಂದೇ ಚಿತ್ತವೃತ್ತಿ ಉಳಿದಾಗ ಆ ದೇವ ಮಾಯೆ ಮತ್ತು ಅದರ ಆಟ ಮಾಟಗಳು ಅರಿವಿಗೆ ಬರುತ್ತವೆ.

7

**ಭಿನ್ನ ದೇಹದಲಿ ಏಕಜೀವ ಕಾಣುವರು ಕರಗಿ ಮಾಗಿ**
**ಯಾರೊ ಮೋಹದಲಿ, ಯಾರೊ ಊಹೆಯಲಿ, ಯಾರೊ ಯೋಗಿಯಾಗಿ ॥**
**ಸವಿಯನುಣ್ಣುವರು ಬಾಳನೆಲೆಯ ಬಗೆಬಗೆಯ ಜಾವದಲ್ಲಿ**
**ಕಾಮಿ ನೋವಿನಲಿ, ಕವಿಯು ಭಾವದಲಿ, ಭಕ್ತ ಜೀವದಲ್ಲಿ ॥**

ಈ ಲೋಕದ ಹೆಣ್ಣು ಗಂಡುಗಳು ಭಿನ್ನ ದೇಹದಲ್ಲಿದ್ದು ಜೀವಲೋಕದ ಬವಣೆಯಲ್ಲಿ ಕರಗಿ ಮಾಗುವರು. ಅದರ ಫಲವಾಗಿ ಅವರು ಏಕಜೀವಿಗಳಂತೆ ಕಾಣುವರು. ಈ ಬಾಳನ್ನು ಆಶ್ರಯಿಸಿ ಜೀವಿಸುವಾಗ ಬಗೆ ಬಗೆಯ ಜಾವದಲ್ಲಿ ಯಾರೋ ಮೋಹದಲ್ಲಿ, ಯಾರೋ ಊಹೆಯಲ್ಲಿ ಯಾರೋ ಯೋಗಿಯಾಗಿ ಸವಿಯನ್ನು ಉಣ್ಣುವರು. ಓರ್ವ, ಮೋಹದವನು, ಕಾಮಿಯಾಗಿ ನೋವಿನಲ್ಲಿರುವನು, ಇನ್ನೋರ್ವ ಊಹೆಯ ಕಲ್ಪನಾ ಪ್ರಪಂಚದಲ್ಲಿ ಕವಿಯಾಗಿರುವನು, ಮತ್ತೊಬ್ಬ ಯೋಗಿಯಾಗಿ ಭಕ್ತಜೀವದಲ್ಲಿರುವನು.

8

**ಕಾಮತೃಪ್ತಿಯಲಿ ಸ್ನೇಹ ಸುಪ್ತಿಯಲಿ ಒಬ್ಬ ಮೈಯನುಣಿಸೆ**
**ಭಾವದೀಪ್ತಿಯಲಿ ಛಂದಮಾಯೆಯಲಿ ಒಬ್ಬಮಾತ ಕುಣಿಸೆ ॥**
**ತನ್ನ ಜೀವ ತಾದಾತ್ಮ್ಯ ಹೊಂದದೇ ತಣಿಸಲಾರನೊಬ್ಬ**
**ಯಾರಿಗೇತರಲಿ ಜೀವ ಅದುವೆ ಸವಿ; ಅವರಿಗದುವೆ ಹಬ್ಬ ॥**

ಈ ಮೂರು ಬಗೆಯವರಲ್ಲಿ ಕಾಮಿಯಾದವನು ಕಾಮ ತೃಪ್ತಿಯಲ್ಲಿ, ಸ್ನೇಹಸುಪ್ತಿಯಲ್ಲಿ ಮೈಯನ್ನು ಉಣಿಸುವನು. ಕವಿಯಾದವನು ಭಾವದೀಪ್ತಿಯಲ್ಲಿ ಛಂದಸ್ಸಿನ ಮಾಯೆಯಲಿ ಮಾತನ್ನು ಕುಣಿಸುವನು. ಯೋಗಿಯಾದವನು ತನ್ನ ಜೀವವು ಅನಂತ ಚೇತನದಲ್ಲಿ ಅಧ್ಯಾತ್ಮ ಭಾವ ಹೊಂದದೆ ತಣಿಯಲಾರನು. 'ಯಾರಿಗೇತರಲಿ ಜೀವ ಅದುವೆ ಸವಿ; ಅವರಿಗದುವೆ ಹಬ್ಬ'.

9

**ಕಾಮಿ ಬಗ್ಗುವನು ದೇಹಿ ಎಂದು ಮೋಹದಲಿ ಕಾಲಿಗಡಸಿ**
**ಕವಿಯು ಒಗ್ಗುವನು ತನ್ನನಂಗ ಭಾವಕ್ಕೆ ಮಾತುತೊಡಿಸಿ ॥**
**ಭಕ್ತ ಹಿಗ್ಗುವನು ತನ್ನ ಜೀವ ಹಸಮಾಡಿ ದೇವನಾಗಿ**
**ಒಬ್ಬ ನೊಲಿಸುತಿಹ ಒಂದೆ ನೂಲಿನಲಿ ಎಲ್ಲ ಕಾವನಾಗಿ ॥**

ಈ ಮೂವರಲ್ಲಿ ಕಾಮಿಯು ಮೋಹದಲ್ಲಿ ಕಾಲಿಗೆ ಬಿದ್ದು ದೇಹಿ ಎಂದು ಬಗ್ಗುತ್ತಾನೆ. ಕವಿಯು ತನ್ನ ಅನಂಗ ಭಾವಕ್ಕೆ ಮಾತು ತೊಡಿಸಿ ಒಗ್ಗುತ್ತಾನೆ, ಅರ್ಥಾತ್ ಹರಿಯುತ್ತಾನೆ. ಭಕ್ತನು ತನ್ನ ಜೀವವನ್ನು ಹಸನುಗೊಳಿಸಿಕೊಂಡು ದೇವನಲ್ಲಿ ಒಂದಾಗಿ ಹಿಗ್ಗುವನು.

ಇದು ಪ್ರೇಮದ ಮೂರು ಬಗೆ. ಈ ಮೂರು ಪ್ರಕಾರದ ಜೀವರನ್ನು ಒಬ್ಬನೇ ಅನಂತಶಕ್ತನು ಒಂದೇ ನೂಲಿನಲ್ಲಿ ಹಿಡಿದು ಅವರವರಿಗೆ ತಕ್ಕಂತೆ ಒಲಿದು ಬದುಕುವಂತೆ ಮಾಡುತ್ತ ಎಲ್ಲರನ್ನೂ ಕಾಯುತ್ತಿದ್ದಾನೆ.

*

ಈ ಮೇಲಿನ ಭಾಗದಲ್ಲಿ 'ಮೇಘದೂತ' ಕಾವ್ಯ ನಾಯಕ ಯಕ್ಷನ ಮೂರು ಹಂತಗಳು ಗೋಚರಿಸುತ್ತವೆ. ಅವನು ರಾಮಗಿರಿಯ ವನ ಪ್ರದೇಶದಲ್ಲಿ ಆ ಪ್ರಕೃತಿಯ ಲೀಲಾ ವಿನೋದದಲ್ಲಿ ಕವಿಯಾಗಿ ಭಾವಲೋಕದಲ್ಲಿರುವನು. ವಿರಹದ ಬೆಂಕಿಯಲ್ಲಿ ಬೆಂದ ಅವನು ಕಾಮಿಯಾಗಿ ನೋವಿನಲ್ಲಿರುವನು. ಇದು ಅವನ ಈಗಿನವರೆಗಿನ ಶಾಪದ ಅವಧಿಯ ಎಂಟು ತಿಂಗಳ ಸ್ಥಿತಿ.

ಅವನು ಆಷಾಢದ ಮೊದಲ ದಿನ ಶುಭ್ರ ಆಗಸದಲ್ಲಿ ಶಾಂತವಾಗಿ ತೇಲುತ್ತ ಸಾಗುವ ಮೋಡವನ್ನು ನೋಡುವನು. ಅದರ ಮೂಲಕ ತನ್ನ ಪ್ರಿಯಪತ್ನಿ ಯಕ್ಷಿಗೆ ಸಂದೇಶ ಕಳುಹಿಸುವ ಕಲ್ಪನೆಗೆ ಒಳಗಾಗುವನು. ಅದರೊಡನೆ ಸಂಭಾಷಿಸುತ್ತ ಅಲಕಾ ನಗರಿಯ ಮಾರ್ಗವನ್ನು ತಿಳಿಸುವನು. ತನ್ನ ಪತ್ನಿಯ ವಿರಹಾವಸ್ಥೆಯನ್ನು ಕಲ್ಪಿಸಿಕೊಂಡು ಅದನ್ನು ಮೇಘಕ್ಕೆ ಆತ್ಮೀಯ ಬಂಧು ಭಾವದಲ್ಲಿ ಮನವರಿಕೆ ಮಾಡಿಕೊಡುವನು. ಅನಂತರ ಉಳಿದ ಶಾಪದ ನಾಲ್ಕು ತಿಂಗಳು ಚಾತುರ್ಮಾಸ ವ್ರತದ ದಿನಗಳು.

ಆ ಅವಧಿಯು ದೇವತೆಗಳಿಗೆ (ಹಾಗೆಯೇ ಯಕ್ಷರಿಗೆ) ಭೋಗದ ಬದುಕು ನಿಷಿದ್ಧ. ಅವರು ತಪಸ್ಸು, ಇಂದ್ರಿಯನಿಗ್ರಹ, ಧ್ಯಾನಸಾಧನೆಗಳಲ್ಲಿ ತೊಡಗಬೇಕಾಗುತ್ತದೆ. ಹಾಗಾಗಿ ಯಕ್ಷನು ಆ ಉಳಿದ ನಾಲ್ಕು ತಿಂಗಳನ್ನು ಭಕ್ತನಾಗಿದ್ದು ಭಗವಂತನ ಧ್ಯಾನದಲ್ಲಿರಲು ನಿಶ್ಚಯಿಸುತ್ತಾನೆ. ತನ್ನ ಜೀವವನ್ನು ಶುದ್ಧಗೊಳಿಸಿಕೊಳ್ಳುತ್ತಾನೆ.

**ಭೂಮಿಯ ಕಾಮ**

10

**ಮಣ್ಣು–ಹೆಣ್ಣು ಬಾನೊಡೆಯನಿಂದ ಅಗಲಿಹಳನಾದಿಯಿಂದ**
**ವಿರಹ ಬವಣೆಯಲಿ ತಿರುಗೆ ತಿರುಗುವಳು ಹೊತ್ತು ಸುತ್ತಿನಿಂದ ॥**
**ಕಣ್ಣ ನೀರು ಕಡಲಾಗಿ ಕಾದು ಉಗಿಯಾಗಿ ಮೋಡವಾಗಿ**
**ಎದೆಗೆ ಉದುರೆ ಬಾನಿಂದ, ನವಿರುವಳು ಹೃದಯ ಹಚ್ಚನಾಗಿ ॥**

ಆದಿಯಿಂದ ಈ ಮಣ್ಣು ಹೆಣ್ಣು ಬಾನೊಡೆಯನಿಂದ ಅಗಲಿರುವಳು. ಅವಳು ವಿರಹದ ಬವಣೆಯಲ್ಲಿ ಸೂರ್ಯನನ್ನು ಸುತ್ತುತ್ತ ತಿರುಗುತ್ತಿರುವಳು. ಅವಳ ಕಣ್ಣ ನೀರು ಕಡಲಾಗಿ ಹರಿದಿದೆ. ಅದು ಉಗಿಯಾಗಿ, ಮೋಡವಾಗಿ ಮುಗಿಲಿಗೆ ಸಾಗಿದೆ. ಪತಿಯಾದ ಬಾನಿನಿಂದ ಅದು ಸುಖದ ಕಣ್ಣೀರು ಹರಿದಂತೆ ಮಳೆಯಾಗಿ ಎದೆಗೆ

ಒರಗುವುದು. ಆಗ ಅವಳ ಹೃದಯ ಹಚ್ಚ ಹಸಿರಾಗಿ ಪುಲಕಗೊಂಡು ನವಿರುವುದು.ಇದು ಕಲ್ಪನಾತೀತ ಕಾಮದ ಪ್ರಕೃತಿಯಲ್ಲಿಯ ಉಲ್ಲಾಸ.

**ಇಳೀ ಮಳೀ ಬೇಕು ಅಂತಿತ್ತು**
**ಮಳೀ ಇಳೀ ಬೇಕು ಅಂತಿತ್ತು**
**– (ಮಾಡಾ – ತಾ ಲೆಕ್ಕಣಿಕಿ ತಾ ದೌತಿ)**

**ಯಕ್ಷ–ಯಕ್ಷಿ**

11

**ಮೂರು ಮೈಯ್ಯ ಮುಪ್ಪುರಿಯ ಒಲವು ಕಿಚ್ಚಾಗಿ ಕುಲುಮೆಯಂತೆ**
**ಕಾಮ ಕಾದು ಉಕ್ಕಿತ್ತು ಪ್ರೇಮ ತಂತನದ ನಲುಮೆಯಂತೆ ॥**
**ಆಕೆಗಾತ ಮೈ ಉಸಿರು, ಉಸಿರ ಮೈಯಾಗೆ ಆತಗಾಕೆ**
**ಕನಸು ಮನಸಿನಲಿ ಕಾಂತರಾಗೆ ಏಕಾಂತ ಬೇರೆ ಬೇಕೆ ॥**

ಯಕ್ಷ ಕುಬೇರನಿಗೆ ಭೃತ್ಯಾಚಾರ ಸಲ್ಲಿಸುತ್ತಿರುತ್ತಾನೆ. ಅವನು ಹೂವನ್ನು ನೀಡುವ ಕಾಯಕದಲ್ಲಿ ಸ್ವಲ್ಪ ಆಲಸ್ಯ ತೋರಿಸುತ್ತಾನೆ. ಆಗ ಕುಬೇರನು ಹೀಗೆ ಶಾಪ ನೀಡುವನು:

**"ಹೂ ಸಲ್ಲಿಸುವಾ ಹಗುರ ಕಾಯಕವ**
**ಹಗುರೆಣಿಸಿದೆ, ಆಳಲಾ?**
**ಮರಣಶೀಲರಲಿ ಹೋಗು, ಬದುಕು,**
**ನಾ ನೋಡುವೆ ಆ ಬಾಳಲಾ" (ಯಕ್ಷ–ಯಕ್ಷಿ)**

ಆಗ ಅಲ್ಲಿಯ ಸಹೃದಯರು "ಅಯ್ಯೋ ಪಾಪ, ಕುಬೇರ ಶಾಪಕ್ಕೆ ಗುರಿಯಾದ ಯಕ್ಷ" ಎಂದು ನೊಂದುಕೊಳ್ಳುವರು.

ಯಕ್ಷನು ವಿಂಧ್ಯ ಪರ್ವತದ ರಾಮಗಿರಿಗೆ ಬಂದು ಜನಕ ತನಯೆ ಸೀತಾದೇವಿ ಮಿಂದು ಮಡಿಯಾದ ನದಿಯ ತಣ್ಣನೆಯ ಅಂಗಳದಲ್ಲಿ ವಸತಿ ಹೂಡುವನು. ಯಕ್ಷಿಯಿಂದ ದೂರವಾದ ಯಕ್ಷನು ವಿರಹದ ಬೆಂಕಿಯಲ್ಲಿ ಕಾವುಗೊಂಡಾಗ ಪ್ರೇಮಭಾವ ಮೂಡುತ್ತದೆ.

ಯಕ್ಷ ಯಕ್ಷಿ ಮತ್ತು ಅವರ ಜೀವ ಮಿಡಿತ ಉಸಿರು ಎಂಬ ಮೂರು ಮೈ ಹಾಗು ಅವರ ತ್ರಿಕರಣಗಳು (ಕಾಯ, ವಾಕ್, ಮನಸ್ಸು) ಮುಪ್ಪುರಿಗೊಂಡದ್ದು ಒಲವು. ಅದು ಕುಲುಮೆಯಂತೆ ಕಿಚ್ಚಾಗಿದೆ. ಅಲ್ಲಿ ಕಾಮ ಕಾದು ಪ್ರೇಮವೆನ್ನುವುದು ತನ್ನತನದ ಅನುರಾಗದಂತೆ ಉಕ್ಕಿ ಬಂದಿದೆ. ಆಕೆಗೆ ಆತ ಉಸಿರು, ಆತನಿಗೆ ಆಕೆ ಮೈ. ಹಾಗಾಗಿ ಅವರು ಕನಸು ಮನಸಿನಲ್ಲಿ ಅಯಸ್ಕಾಂತದ ಕಾಂತತ್ವದಿಂದ ಒಂದಾಗಿ ಕಾತರರಾಗಿದ್ದಾರೆ. ಅವರಿಗೆ ಏಕಾಂತ ಬೇರೆ ಬೇಕೆ?

12

**ಮೈಯ ಮಲೆಯ ತಲೆಯಲ್ಲಿ ಎಲ್ಲಿ ಅಸರಂತ ದೇವಲೀಲೆ**
**ಬೈತಲಂತೆ ಮಿಂಚಾಡೆ ನಡುವೆ, ಹೆಳಲಾಗೆ ಮೇಘಮಾಲೆ ॥**
**ವಿಂಧ್ಯ ಶಿಖರದಲೆ ಯಕ್ಷ ಚಿತ್ತ ಅಲಕೆಯನು ಚಿತ್ರಿಸಿಹುದು**
**ದೇವಜಾತಿ ಕೆಳಗಿಳಿದರೇನು ಅದು ಬಾನ ಹತ್ತಿರಿಹುದು ॥**

ಯಕ್ಷನ ಮೈಯ ಮಲೆಯಲ್ಲಿ ನಿರಂತರವಾಗಿ ದೈವಲೀಲೆ ಆಡುತ್ತಿದೆ. ಆ ತಲೆಯ ಬೈತಲಿನ ಹಾಗೆ ಮಿಂಚು ಆಡುತ್ತಿರಲು ಮೇಘಮಾಲೆ ಹೆಳಲಾಗಿದೆ. ಯಕ್ಷನ ಚಿತ್ತವು ವಿಂಧ್ಯ ಶಿಖರದಲ್ಲೇ ಅಲಕೆಯನ್ನು ಚಿತ್ರಿಸಿದೆ. ದೇವಜಾತಿ ಕೆಳಗಿಳಿದು ಬಂದರೂ ಅದು ಬಾನಿನ ಹತ್ತಿರವೇ ಇರುತ್ತದೆ.

13

**ಈ ಯಕ್ಷನಕ್ಷಿಗಳು ಪಕ್ಷಿಯಂತೆ ಹಾರಿದವು ಗಾಳಿಯಲ್ಲಿ**
**ಸಿಗಲಿಲ್ಲ ತಾವು ಜಗದಗಲ ಬೀಸಿದಾ ನಯನಜಾಲದಲ್ಲಿ ॥**
**ಶೃಂಗಾರ ತೀರ್ಥದಲಿ ಮಿಂದು ಚಿತ್ತ ವೈದರ್ಭಿ ರೀತಿಯಾಗಿ**
**ಅಂತೆಯೇ ಬಂತು ಗಾಂಧರ್ವ ಪ್ರೀತಿ ಗಾಂಧರ್ವ ಗೀತಿಯಾಗಿ ॥**

ಯಕ್ಷನ ಕಣ್ಣುಗಳು ಪಕ್ಷಿಯಂತೆ ಗಾಳಿಯಲ್ಲಿ ಹಾರಿದವು. ಜಗದಗಲ ಬೀಸಿದ ಆ ನಯನಜಾಲದಲ್ಲಿ ನಿಲ್ಲಲು ತಾವು ಸಿಗಲಿಲ್ಲ. ಶೃಂಗಾರ ತೀರ್ಥದಲ್ಲಿ ಮಿಂದ ಅವನ ಚಿತ್ತವು ವೈದರ್ಭಿ ರೀತಿಯಾಯಿತು[1]. ಆ ಗಾಂಧರ್ವ ಪ್ರೀತಿಯು ಗಾಂಧರ್ವ ಗೀತಿಯಾಗಿ ಮಧುರ ಭಾವಕ್ಕೊಯ್ದಿತು.

---

[1] ಸಂಸ್ಕೃತ ಕಾವ್ಯದಲ್ಲಿ ಪಾಂಚಾಲಿ, ಲಾಟೀಯ, ಗೌಡೀಯ ಮತ್ತು ವೈದರ್ಭಿ ಎಂಬ ನಾಲ್ಕು ಶೈಲಿಗಳಿವೆ. ಅದನ್ನು ರುದ್ರಟ ಹೀಗೆ ವಿವರಿಸಿದ್ದಾನೆ

ಪಾಂಚಾಲೀ ಲಾಟೀಯ ಗೌಡೀಯ ಚೇತಿ ನಾಮತೋ ವಿಹಿತಃ ॥

ಲಘು ಮಧ್ಯಾಯತ ವಿರಚನಾ ಸಮಾಸಭೇದಾದಿಮಾಂ ತತ್ರ ॥ ರುದ್ರಟ (ಕಾವ್ಯಾಲಂಕಾರ 2–4)

ಪಾಂಚಾಲಿ ಲಘುಶೈಲಿ, ಲಾಟೀಯ ಮಧ್ಯಮ ಶೈಲಿ, ಗೌಡೀಯ ಸಮಾಸಯುಕ್ತವಾದ ಜಟಿಲಶೈಲಿ ಮತ್ತು ವೈದರ್ಭೀ ಜಟಿಲವಲ್ಲದ, ಸರಳ ಸಮಗ್ರ ಶೈಲಿಯಾಗಿದೆ.

ರುದ್ರಟನು ಮುಂದುವರಿದು ವೈದರ್ಭಿಯೊಂದೇ ಸವಾಸಯುಕ್ತವಲ್ಲದ ರೀತಿಯಾಗಿದೆ. ("ವೃತ್ತೇರಸಮಾಸಾಯ ವೈದರ್ಭೀ ರೀತಿರೇಕೈವ" ಕಾವ್ಯಾಲಂಕಾರ, 2–6) ಎಂದಿದ್ದಾನೆ.

ವೈದರ್ಭೀ ಶೈಲಿಗೆ ಹತ್ತು ಲಕ್ಷಣಗಳಿದ್ದು ಅವನ್ನು ದಂಡಿ ಹೀಗೆ ಪಟ್ಟಿ ಮಾಡಿದ್ದಾನೆ:

ಶ್ಲೇಷಃ ಪ್ರಸಾದಃ ಸಮತಾ ಮಾಧುರ್ಯಂ ಸುಕುಮಾರತಾ ।

ಅರ್ಥವ್ಯಕ್ತಿರುದಾರತ್ವಮೋಜಃ ಕಾಂತಿಸಮಾಧಯಃ ॥

ಇತಿ ವೈದರ್ಭಮಾರ್ಗಸ್ಯ ಪ್ರಾಣಃ ದಶಗುಣಾಃ ಸ್ಮೃತಃ ।

ಏಷಾಂ ವಿಪರ್ಯಯಃ ಪ್ರಾಯೋ ದೃಶ್ಯತೇ ಗೌಡವರ್ತ್ಮನಿ ॥

ಸಂಸ್ಕೃತ ಕಾವ್ಯದಲ್ಲಿ ಪಾಂಚಾಲಿ, ಲಾಟೀಯ, ಗೌಡೀಯ ಮತ್ತು ವೈದರ್ಭಿ ಎಂಬ ನಾಲ್ಕು ಶೈಲಿಗಳಿವೆ. ಅದನ್ನು ರುದ್ರಟ ಹೀಗೆ ವಿವರಿಸಿದ್ದಾನೆ

(ಕಾವ್ಯಾದರ್ಶ 1–41, 42)

14

**ಜೀವವೇಸು ಭವಚಕ್ರ ತಿರುಗಿ ಮರೆತೀತು ಆತ್ಮತತ್ತ್ವ**
**ಮರ್ತ್ಯಕಿಳಿದರೂ ಯಕ್ಷ ಮುಳುಗುವನೇ? ಒಳಗೆ ದಿವ್ಯಸತ್ತ್ವ ॥**
**ಅಲಕೆಯಲ್ಲಿ ಕೈಲಾಸದೆಡೆಗೆ ತಾ ವಹಿಸಿ ಸಖನ ಚಿಂತೆ**
**ಸಾಕ್ಷಿಯಾಗಿ ಆ ಯಕ್ಷಿ ತಪಿಸುತಿರೆ ಅಂತರಾತ್ಮನಂತೆ ॥**

ಜೀವ ಎಷ್ಟು ಭವಚಕ್ರದಲ್ಲಿ ತಿರುಗಿದರೂ ಆತ್ಮತತ್ವವನ್ನು ಮರೆಯಲು ಸಾಧ್ಯವೇ? ಮರ್ತ್ಯಕ್ಕೆ ಇಳಿದರೂ ಯಕ್ಷನು ತನ್ನೊಳಗಿನ ದಿವ್ಯಸತ್ವವನ್ನು ಮರೆಯುವನೇ? ಕೈಲಾಸದ ಹತ್ತಿರವಿರುವ ಅಲಕೆಯಲ್ಲಿ ಆ ಯಕ್ಷಿ ಸಖನ ಜೊತೆಯಲ್ಲಿ ಮುಳುಗಿದ್ದಾಳೆ. ಅವಳು ತನ್ನ ಅಂತರಾತ್ಮನಂತೆ ಅವನನ್ನೇ ತಪಿಸುತ್ತ ಪ್ರೀತಿಯ ಸಾಕ್ಷಿಯಾಗಿದ್ದಾಳೆ.

**ಯಕ್ಷನ ಮೇಘ**

15

**ಮೈಯ್ಯ ಉರಿಗೆ ಬಗೆ ಉಗಿಯು ಹೊತ್ತಿ ನಿಟ್ಟುಸಿರಿನೊಡನೆ ಏರಿ**
**ಕಣ್ಣು–ಮಂಜು ಕಂಬನಿಯು ತುಂಬಿ ಮುನ್ನೆನಹು ಮಿಂಚು ಸೇರಿ ॥**
**ಗುಡುಗೆ ಗುಡುಗುತಿರೆ ವೈರಿ–ವಿಧಿಯ ಕಾಟಕ್ಕೆ ಎದೆಯು ತಾನು[1]**
**ವಿರಹಿ ಹೃದಯದುದ್ಗಾರಸಾರವೇ ಮೇಘವಲ್ಲದೇನು? ॥**

ವಿರಹದಿಂದ ಬಳಲಿದ ಯಕ್ಷನ ಮೈಯ ಉರಿಗೆ ಆಲೋಚನೆಯ ಉಗಿಯು ಹೊತ್ತಿಕೊಂಡಿದೆ. ಅದು ನಿಟ್ಟುಸಿರಾಗಿ ಮೇಲೆ ಮೇಲಕ್ಕೆ ಏರುತ್ತಿದೆ. ಪತ್ನಿಯ ಅಗಲಿಕೆಯ ಕಟ್ಟೊಡೆದ ಕಣ್ಣು ಮಂಜು ಕಂಬನಿಯಿಂದ ತುಂಬಿದೆ. ಅದಕ್ಕೆ ಅವಳೊಡನೆ ಸಂಭೋಗ ಶೃಂಗಾರದಲ್ಲಿದ್ದ ಮಿಂಚು ಮುನ್ನಿನ ನೆನಪಾಗಿ ಹೊಳೆಯುತ್ತಿದೆ. ವೈರಿ ವಿಧಿ ಕಾಟಕ್ಕೆ ವಿಪ್ರಲಂಭ ಶೃಂಗಾರಕ್ಕೆ ಒಳಗಾದ ಎದೆಯು ಗುಡುಗೆ ಗುಡುಗುತ್ತಿದೆ. ಹಾಗಾಗಿ ವಿರಹಿ ಹೃದಯದಿಂದ ಭಾವದೀಪ್ತಿಯಾಗಿ ಹೊರಹೊಮ್ಮುವ ಮಾತುಗಳ ಸಾರವೇ ಮೇಘವಲ್ಲವೇನು?

**ಕವಿಯ ಮೇಘ**

16

**ಮಾತು ಜ್ಯೋತಿ ಆ ಹುರುಳು ಧೂಮ ರಸ ಸಲಿಲ ಭಾವಗಾಳಿ**
**ಕವಿಯೊಳಾಗಿ ಕಟ್ಟಿತ್ತು ಕಾವ್ಯ ನವಮೇಘ ರೂಪ ತಾಳಿ ॥**

---

[1] ವೈರಿ ವಿಧಿಯು ಕಟ್ಟಿರಲು ದಾರಿ, ತೆರೆದಿದ್ದೆ ಹಾದಿ ಜಾಣೆ
ಭಾವದಿಂದ ಒಡಗೂಡ ಬಯಸಿದೆನೆ ನನ್ನ ಭಾವರಾಣಿ ॥ (ಕನ್ನಡ ಮೇಘದೂತ 2.39)

ಸ್ಥಾಯಿ ಅಲ್ಲಿ ಸಂಚಾರದಲ್ಲಿ ರಸಪಾಕವಾಗಿ ಬಂತು
ಮೆರೆವ ಹಾಗೆ ಆ ಸುಟ್ಟ ಕಾಮ ಪ್ರದ್ಯುಮ್ನನಾಗಿ ನಿಂತು[1] ॥

ಕವಿಯ ಮಾತೇ ಜ್ಯೋತಿ, ಸತ್ವವೇ ಧೂಮ, ರಸವೇ ಜಲ, ಭಾವವೇ ಗಾಳಿ. ಇವು ಒಟ್ಟಾಗಿ ಸೇರಿ ನವಮೇಘರೂಪ ತಾಳಿ ಕಾವ್ಯ ಸೃಷ್ಟಿಗೊಂಡಿತು. ಪ್ರೇಮದ ಸ್ಥಾಯಿಯಲ್ಲಿ ಸಂಚಾರಿ ಭಾವದಲ್ಲಿ ಹರಿದು ರಸಪಾಕವಾಗಿ ಹೊಮ್ಮಿತು. ಹಾಗೆ ಹೊರಸೂಸಿ ಬಂದದ್ದು ಸುಟ್ಟು ಹೋದ ಕಾಮನೇ ಪ್ರದ್ಯುಮ್ನನಾಗಿ ಜನಿಸಿ ಬಂದು ರೂಪುಗೊಂಡು ನಿಂತಂತೆ ದಿವ್ಯಾನುಭವ. ಈ ಕವಿಯ ಮೇಘದಲ್ಲಿ ಪ್ರೇಮ, ಮನ್ಮಥ, ಪ್ರದ್ಯುಮ್ನ ಮರುಹುಟ್ಟು ಪಡೆದಂತೆ ಗೋಚರವಾಗುವುದು.

**ಕವಿ ಕಾಳಿದಾಸ**

17

**ತಾನು ಉಂಡ ಎದೆಯೊಲುಮೆ ತಾನು ಸೊಗವಟ್ಟು ಪಡೆದ ಹೆಣ್ಣು**
**ತಾನು ಕಂಡ ಋತುಮಾನ ತನ್ನ ಬಾಗಿಸಿದ ಚೆಲುವು ಕಣ್ಣು ॥**
**ಬಂದ ಬಂದ ನದಿ ಬೆಟ್ಟ ಪಟ್ಟಣದ ರಮ್ಯ ಛಾಯೆಯಿಂದ**
**ಮೋಡದೊಂದು ನೆವ ಮಾಡಿ ಹಾಡಿದನು ಯಕ್ಷ-ಮಾಯೆಯಿಂದ ॥**

ಕವಿ ಕಾಳಿದಾಸನು ಈ ನೆಲದ ಆತ್ಮೀಯ ಬಂಧು ಬಾಂಧವರ ಎದೆಯ ಪ್ರೀತಿಯನ್ನು. ತಾನು ಆನಂದದಿಂದ ಸುಖ ಪಟ್ಟು, ತನ್ನ ಇಚ್ಛೆಯ ಹೆಣ್ಣನ್ನು. ತಾನು ಕಂಡ ಋತುಮಾನಗಳನ್ನು ತನ್ನನ್ನು ಸೆಳೆದ ಚೆಲುವು ಕಣ್ಣನ್ನು – ತಾನು ಸಂಚರಿಸಿ ನೋಡಿದ ವಿವಿಧ ನದಿ ಬೆಟ್ಟ ಪಟ್ಟಣಗಳ ರಮಣೀಯ ಛಾಯೆಯ ಮೂಲಕ ವರ್ಣಿಸಿದ. ಮೋಡವನ್ನು ಒಂದು ನೆಪ ಮಾಡಿಕೊಂಡು ಯಕ್ಷ ಮಾಯೆಯಿಂದ 'ಮೇಘದೂತ' ಕಾವ್ಯವನ್ನು ರಚಿಸಿ ಹಾಡಿದ.

18

**ಇರಲಿ ಬೆಟ್ಟ ನದಿ, ಇರಲಿ ಶಿವನು ಸತಿ, ಇರಲಿ ಕಾಡು ನಾಡು**
**ಇರಲಿ ಕಾಮ-ರತಿ , ಅಜನು-ಇಂದುಮತಿ, ಬರಲಿ ಸಾವು ಕೇಡು ॥**
**ಯಕ್ಷ-ಯಕ್ಷಿ ಇರಲಕ್ಷಿ-ಪಕ್ಷಿ ಕಣ್ಗಂಡ ಪಾತ್ರದಿಂದ**
**ಪ್ರೇಮದಾಟವನು ಕವಿಯು ಆಡಿಸಿದ ಕಾಮಸೂತ್ರದಿಂದ ॥**

ಕವಿ ಕಾಳಿದಾಸನು ತನ್ನ ಕಣ್ಣೆಂಬ ಪಕ್ಷಿ ತಾನು ಕಂಡು ತನ್ನದಾಗಿಸಿಕೊಂಡ ಆ ಯಕ್ಷ ಯಕ್ಷಿಯರ ಪ್ರೇಮದಾಟವನ್ನು ಕಾಮಸೂತ್ರದಿಂದ ಆಡಿಸಿದನು. ಅದರಲ್ಲಿ ಈ

---

[1] ಪ್ರದ್ಯುಮ್ನ ಮನ್ಮಥನ ಅವತಾರ. ತೇಜಸ್ವಿಯಾದ ಸನತ್ಕುಮಾರನ ಅಂಶದಿಂದ ಹುಟ್ಟಿದವನು. ಅವನು ಕೃಷ್ಣ ರುಕ್ಮಿಣಿಯರ ಮಗ.

ಲೋಕದ ರಮಣೀಯ ಬೆಟ್ಟ, ನದಿ, ಕಾಡು, ನಾಡು ಇದೆ. ಮನುಷ್ಯ ತನ್ನ ಕಲ್ಪನೆಯಲ್ಲಿ ತನ್ನ ಹಾಗೂ ತನ್ನ ಜನಾಂಗದ ಒಳಿತಿಗಾಗಿ ಸೃಷ್ಟಿಸಿಕೊಂಡ ಕಾಮ-ರತಿ, ಇಂದುಮತಿಯರಿದ್ದಾರೆ. ಮನುಜನ ಅಶಾಶ್ವತ ಶರೀರದಲ್ಲಿ ಸಾವು ಕೇಡು ಸಹಜವಾಗಿದ್ದು ಅದೂ ಇಲ್ಲಿದೆ.

19

**ಜಗವೆ ದೇವತನುವೆಂದು ಮಣಿದೆ ನೀನೇನು ನಿನ್ನ ಮತಿಯು !**
**ರತಿಯು ನಿನ್ನ ರಸದಲ್ಲಿ ನಾಂದು ಆಗಿಹಳು ಮುಕ್ತಿ ಸತಿಯು ॥**
**ಭಕ್ತ ನೀನು ಅನುರಕ್ತ ದಿವ್ಯದಲಿ ಉಳಿದ ಕಣ್ಣು ಭವಿಯು**
**ಎಲ್ಲ ಕಡೆಗು ಚೈತನ್ಯ ಲೀಲೆ ಕಂಡವನೆ ನೀನೆ ಕವಿಯು ॥**

ಓ ಕಾಳಿದಾಸನೆ, ಈ ಜಗತ್ತೇ ದೇವರ ಶರೀರವೆಂದು ಅರಿತು ಇದಕ್ಕೆ ಮಣಿದ ನಿನ್ನನ್ನು, ನಿನ್ನ ಪ್ರತಿಭಾ ಶಕ್ತಿಯನ್ನು ಏನೆಂದು ವರ್ಣಿಸಲಿ? ರತಿಯು ನಿನ್ನ ಕಾವ್ಯರಸದಲ್ಲಿ ತೊಯ್ದು ಆರ್ದ್ರವಾಗಿ ಹೋಗಿ ಮುಕ್ತಿ ಸತಿಯಾಗಿದ್ದಾಳೆ. ಒಲವಿನ ದಿವ್ಯ ಚೇತನದಲ್ಲಿ ಮಿಂದ ನೀನು ಗಾಢ ಪ್ರೇಮದ ಭಕ್ತ. ಆದರೆ ನೀನು ಸಂಸಾರ ಬಂಧನಕ್ಕೆ ಒಳಗಾದ ಭವಿ. ನೀನು ಕಣ್ಣು ಹರಿಸಿದ ಕಡೆಯಲ್ಲೆಲ್ಲ ಈ ಸೃಷ್ಟಿಯಲ್ಲಿ ಚೈತನ್ಯ ಲೀಲೆ ಕಂಡವನು; ನೀನು ಕವಿ.

20

**ಬೆಟ್ಟಕೊಲಿಯೆ ಮನ ಬೆಟ್ಟದಂತೆ ಬಗೆಹರುಹು ಎತ್ತರಹುದು**
**ಹೊಳೆಗೆ ಒಲಿಯೆ ಮನ ಹೊಳೆಯ ಹಾಗೆ ಬಗೆ ಭಾವ ಹೊಳಿಸುತಿಹುದು ॥**
**ಬೆಟ್ಟ ಹೊಳೆಯ ಬಿಟ್ಟಿರದು ನಿನ್ನ ಬಗೆ ಎಂಥ ಭವ್ಯ ರುಚಿಯು**
**ಕಡಲಿನಂತೆ ಗಂಭೀರ ಗುಂಭ! ಸೌಂದರ್ಯದಂತೆ ಶುಚಿಯು ॥**

ಮನಸ್ಸು ಬೆಟ್ಟಕ್ಕೆ ಒಲಿದು ಅದರಲ್ಲಿ ಒಂದಾಗಿ ಚಿಂತಿಸಿದಾಗ ಆ ಬೆಟ್ಟದಂತೆ ಆಲೋಚನೆ ಎತ್ತರವೂ ವಿಶಾಲವೂ ಗಹನವೂ ಆಗುವುದು. ಮನಸ್ಸು ಜೀವ ಚೈತನ್ಯವಾದ ನದಿಗೆ ಒಲಿದರೆ ಅದು ನದಿಯ ಹಾಗೆ ಹರಿಹರಿದು ಸಾಗಿದಂತೆ ಬಗೆ ಬಗೆಯ ಭಾವವನ್ನು ಹೊಳೆಯಿಸುವುದು. ಬೆಟ್ಟ ಹೊಳೆಯ ಬಾಂಧವ್ಯ ಸತ್ಯ. ಹೊಳೆ ಜನಿಸುವುದು ಬೆಟ್ಟದಲ್ಲಿ. ಅದು ಅಲ್ಲಿಂದ ಹರಿದು ನಲಿವ ಸೊಬಗಿನ ಜೊತೆಗೆ ಜೀವಪೋಷಕ ಶಕ್ತಿಯ ಸೆಲೆಯಾಗಿ ಸಸ್ಯ, ಪ್ರಾಣಿಪಕ್ಷಿ, ಮನುಜ ಮುಂತಾದ ಎಲ್ಲ ಜೀವಿಗಳಿಗೆ ಜೀವನಾಧಾರವಾಗಿ ಚಲಿಸುವುದು. ಕವಿಯೆ, ನಿನ್ನದೂ ಅದೇ ತರಹದ ಜೀವಪೋಷಕ, ಚಿಂತನಾ ಪರಾಮರ್ಶೆ. ಹೊಳೆಯ ರುಚಿಯಂತೆ ಮನುಷ್ಯ ಚೇತನದ ಭವ್ಯ ರುಚಿ. ಓಹ್, ನಿನ್ನ ಕಾವ್ಯ 'ಕಡಲಿನಂತೆ ಗಂಭೀರ ಗುಂಭ, ಸೌಂದರ್ಯದಂತೆ ಶುಚಿಯು'.

21

ಮಂದಾಕ್ರಾಂತ

**ಆ ವಿರಹ ಅಲಸ ಗುರುಪದಗಳಿಂದ ಲೀಲಾಲೋಲವಾಗಿ**
**ಆಕ್ರಾಂತವಾಗಿ ಉತ್ಕಂಠೆಯಿಂದ ಲಘುಪದಗಳಿಂದ ಸಾಗಿ ॥**
**ಮುಗಿತಾಯದಲ್ಲಿ ಗುರುಲಘುಗಳಿಂದ ದಿಂಕಿಡುವ ಹಾಗೆ ನೂಂಕಿ**
**ಮಂದಾಃಕ್ರಾಂತದಲಿ ವಿರಹಿ ಹೃದಯವನು ಸುಡುವದಣ್ಣ ಬೆಂಕಿ ॥**

ಕಾಳಿದಾಸನ ಮೇಘದೂತ ಮಂದಾಕ್ರಾಂತ ಅಕ್ಷರ ವೃತ್ತದಲ್ಲಿದೆ. ಬೇಂದ್ರೆಯವರು 'ಕನ್ನಡ ಮೇಘದೂತ'ದಲ್ಲಿ ಹೊಸತಾಗಿ ಸೃಷ್ಟಿಸಿರುವ 'ಹೊಸರಗಳೆ' ಜಾತಿಯಲ್ಲಿ ಎರಡೆರಡು ಪಾದಗಳಿಗೆ ಅಂತ್ಯಪ್ರಾಸವಿದೆ. ಅವರು ಇದನ್ನು 'ಮೇಘರಗಳೆ' ಎಂದು ಕರೆದಿದ್ದಾರೆ. ನುಡಿಕಟ್ಟನ್ನು ರೂಪಿಸುವಾಗ ನಾಲ್ಕು ನಾಲ್ಕು ಪಾದಗಳಲ್ಲಿ ಚೌಪದಿಯಾಗಿಸಿದ್ದಾರೆ. ಹಾಗಾಗಿ ಇದು 'ಮೇಘಚೌಪದಿ'ಯಾಗಿದೆ. ಈ ಹೊಸ ಛಂದಸ್ಸಿನ ಸೃಷ್ಟಿಯ ಬಗ್ಗೆ 'ಕನ್ನಡ ಮೇಘದೂತ'ದ ಪ್ರಸ್ತಾವನೆಯಲ್ಲಿ ಬೇಂದ್ರೆ ಹೀಗೆ ಸ್ಪಷ್ಟಪಡಿಸಿದ್ದಾರೆ:

"ಮಂದಾಕ್ರಾಂತ ವೃತ್ತದ ಬದಲು । 3, 3, 2 । ಇಂಥ ಮೂರು ಗಣಗಳುಳ್ಳ ಎಂಟು ಮಾತ್ರೆಯ ಗಣ ಮೂರು, ಕೊನೆಗೊಂದು ಗುರು ಅಂತೂ 26 ಮಾತ್ರೆಯ ಮೂರು ನಾಲ್ಕು ಕಿಂಚಿತ್ ಯತಿಗಳುಳ್ಳ ಕೊನೆಯ ಪ್ರಾಸದ ಚತುಷ್ಪಾದದ ಒಂದು ಹೊಸ 'ರಗಳೆ'ಯ ಜಾತಿಯಲ್ಲಿ ಇಲ್ಲಿ ರಚಿಸಿ ಬಳಸಿದ್ದೇನೆ".

ಬೇಂದ್ರೆಯವರು ರೂಪಿಸಿಕೊಂಡಿರುವ ಈ 'ರಗಳೆ' ಛಂದಸ್ಸಿನಲ್ಲಿ ಯಕ್ಷನು ವಿರಹದಲ್ಲಿ ತನ್ನಪ್ರಿಯೆಯನ್ನು ಕಾಣುವ ಆಸಕ್ತಿಯನ್ನು ಸೂಚಿಸುವಂತೆ ಉತ್ಸಾಹ ಲಯ 3 ಮಾತ್ರೆಯ ಗಣವಿದೆ. ಅದು ಅನಂತರ ನಿಧಾನವಾಗಿ ಕರಗಿ ದ್ರವಭಾವಕ್ಕೆ ಒಳಗಾಗುವ 2 ಮಾತ್ರೆಯ ದ್ರುತವಿದೆ. ಇದು ವಸ್ತು ವಿಷಯಕ್ಕೆ ತಕ್ಕಂತೆ ಮನದ ವಿವಿಧ ಭಾವಲಹರಿಯನ್ನು ಪರಿಭಾವಿಸಿಕೊಂಡು ಬೇಂದ್ರೆಯವರು ಸೃಷ್ಟಿಸುತ್ತಿದ್ದ ವೈವಿಧ್ಯಪೂರ್ಣ ಛಂದಸ್ಸಿನ ಶೈಲಿಗೆ ಉದಾಹರಣೆಯಾಗಿದೆ.

ಬೇಂದ್ರೆಯವರು ಆ ವಿರಹ ಆಲಸ್ಯವನ್ನು ಗುರುಪದಗಳಿಂದ ಲೀಲಾಲೋಲವಾಗಿ ಚಲಿಸುವಂತೆ ರಚಿಸಿದ್ದಾರೆ. ವಿಪ್ರಲಂಭ ಶೃಂಗಾರದಿಂದ ಉಂಟಾದ ದುಃಖ, ಉದ್ವಿಗ್ನತೆಯನ್ನು ಹಿಡಿದಿಟ್ಟು ಆಡಿಸಿದಂತೆ ಲಘುಪದಗಳಿಂದ ಮುನ್ನಡೆಸಿದ್ದಾರೆ. ಮಂದಾಕ್ರಾಂತದ ಕೊನೆಯ ದ್ವಿಮಾತ್ರಾಗಣ ಮತ್ತು ಮುಡಿಯಲ್ಲಿ ವಿರಹವು ನೂಕಿ ನೆಗೆದು ವಿರಹಿಯ ಹೃದಯವನ್ನು ಸುಡುತ್ತದೆ.

22

**ಜಲದ ಭಾರದಲಿ ಜಲದ ಬಾನಿನಲಿ ಮಂದ ಮಂದವಾಗಿ**
**ಗಾಳಿಯಿಂದ ಆಕ್ರಾಂತವಾಗಿ ಗುಡುಗುಡುಗಿ ದೂಡಿ ನೂಗಿ ॥**

**ನದಿಯಾಗಿ ನಡೆದು, ಬೆಟ್ಟಕ್ಕೆ ತಡೆದು ನಗರಿಯಲಿ ಮೋದವಡೆದು**
**ಸಾಗುತಿಹುದು ಮಂದಾಽಕ್ರಾಂತ-ರಸ ವಿರಹಿ ಛಂದ ಹಿಡಿದು ॥**

ಮೋಡವು ನೀರಿನ ಭಾರದಲ್ಲಿ ಜಲದ ಬಾನಿನಲ್ಲಿ ಮಂದ ಮಂದವಾಗಿ ಸಾಗುತ್ತದೆ. ಅದು ತನ್ನನ್ನು ದೂಡುವ ಗಾಳಿಯಿಂದಾಗಿ ದುಃಖ ಉದ್ವಿಗ್ನತೆಗೆ ಒಳಗಾಗದಂತೆ ಗುಡುಗುಡುಗಿ ಆ ಗಾಳಿಯನ್ನು ನೂಕುತ್ತ ಸಾಗುತ್ತದೆ. ಅದು ತನ್ನ ಪ್ರಿಯತಮೆ ನದಿಗಾಗಿ ನಡೆಯುತ್ತದೆ. ಬೆಟ್ಟದ ತಡೆಗೆ ನಿಲ್ಲುತ್ತದೆ. ನಗರಗಳಲ್ಲಿ ಆಮೋದ ಪ್ರಮೋದಗಳ ಸುಖ ಅನುಭವಿಸುತ್ತದೆ. ಅದು ರಸವಿರಹಿ ಛಂದ ಹಿಡಿದು ಮಂದಾಕ್ರಾಂತ ಲಯದಲ್ಲಿ ಸಾಗುತ್ತದೆ.

23

**ಬೇರೆ ದೂತಕಾವ್ಯಗಳು**

**ನಿನ್ನ ದೂತ-ಪಾದಗಳ ಮುಟ್ಟಿ ಕಟ್ಟಿದರು ಕಬ್ಬವೊಂದು**
**ನಿನ್ನ ಭಾವ ಬೆನ್ನಟ್ಟಿ ಕಂಡರೋ ಯಾರೊ ಹಬ್ಬವೆಂದು ॥**
**'ನಿನ್ನ ದೂತಗರಿ ಗರುಡನಿದಿರು ಕಳುಹುವರೆ ಗುಬ್ಬಿಯೊಂದು**
**ಅಂಚೆ ಕೊಂಚೆ ಶುಕ ಕಾಕ ಕೋಕ ಬಕ ಕೇಕಿ ಭೇಕಿ ಎಂದು[1] ॥**

---

[1] ಕವಿ ಮೇಘದೂತವನ್ನು 'ದೂತಗರಿ' ಎಂದು ಕರೆಯುತ್ತಿದ್ದಾನೆ. 'ಅಂಚೆ, ಕೊಂಚೆ, ಶುಕ, ಕಾಕ, ಕೋಕ, ಬಕ, ಕೇಕಿ, ಭೇಕಿಯು ಕಾಳಿದಾಸನನ್ನು ಕಂಡು ಬೇರೆ ಕವಿಗಳು ರಚಿಸಿದ ದೂತಕಾವ್ಯಗಳನ್ನು ಪ್ರಸ್ತಾಪಿಸುತ್ತಿವೆ. ಕಾಳಿದಾಸನ ಮೇಘದೂತದಿಂದಾಗಿ ಸಂಸ್ಕೃತ ಸಾಹಿತ್ಯ ಪರಂಪರೆಯಲ್ಲಿ 'ದೂತಕಾವ್ಯ' ಎಂಬ ಹೆಸರಿನ ಒಂದು ಹೊಸ ಕಾವ್ಯಪರಂಪರೆಯೇ ಪ್ರಾರಂಭವಾಯಿತು.
'ಕಾಮವಿಲಾಪ ಜಾತಕ' ಎಂಬ ಕೃತಿಯಲ್ಲಿ ಅಪಾಯದಲ್ಲಿ ಸಿಲುಕಿರುವ ವ್ಯಕ್ತಿಯೊಬ್ಬ ತನ್ನ ಹೆಂಡತಿಗೆ ಒಂದು ಕಾಗೆಯ ಮೂಲಕ ಸಂದೇಶ ಕಳುಹಿಸುತ್ತಾನೆ.
'ಹಂಸದೂತ' ಎಂಬ ಕೃತಿಯಲ್ಲಿ ಗೋಪಿಕೆಯರು ಒಂದು ಹಂಸದ ಮೂಲಕ ಮಥುರೆಯಲ್ಲಿದ್ದ ಶ್ರೀಕೃಷ್ಣನಿಗೆ ಸಂದೇಶ ಕಳುಹಿಸುತ್ತಾರೆ. ಇದಲ್ಲದೆ ವೆಂಕಟದೇಶಿಕರ 'ಹಂಸ ಸಂದೇಶ', ಭಟ್ಟ ವಾಮನನ 'ಹಂಸ ಸಂದೇಶ', ರಘುನಾಥದಾಸ ಕವಿಯ 'ಹಂಸದೂತ', ಕವೀಂದ್ರಾಚಾರ್ಯ ಸರಸ್ವತಿಯ 'ಹಂಸದೂತ' ಇವೆಲ್ಲವೂ ಹಂಸದ ಮೂಲಕ ಸಂದೇಶ ಕಳುಹಿಸುವ ದೂತಕಾವ್ಯಗಳಾಗಿವೆ.
ಲಕ್ಷ್ಮಣ ಸೂರಿಯ 'ವಿಪ್ರ ಸಂದೇಶ'ದಲ್ಲಿ ಕೃಷ್ಣ ರುಕ್ಮಿಣಿಯರ ನಡುವೆ ಒಬ್ಬ ಬ್ರಾಹ್ಮಣ ಸಂದೇಶ ವಾಹಕನಾಗುತ್ತಾನೆ.
ರಂಗಾಚಾರ್ಯನ 'ಮಯೂರ ಸಂದೇಶ'ದಲ್ಲಿ ನವಿಲು ಸಂದೇಶ ವಾಹಕವಾಗುತ್ತದೆ.
'ಮನೋದೂತ' ಎಂಬ ಜೈನಕಾವ್ಯದಲ್ಲಿ ಮನಸ್ಸೇ ಸಂದೇಶ ಹೊತ್ತೊಯ್ಯುತ್ತದೆ. ವಿಷ್ಣುದಾಸ, ವ್ರಜನಾಥ ಮುಂತಾದ ಕವಿಗಳ ಹೆಸರಿನಲ್ಲಿ ಮನೋದೂತ ಕಾವ್ಯಗಳಿವೆ.
ವಾಚಸ್ಪತಿಯ ಮೊಮ್ಮಗ ರುದ್ರನ್ಯಾಯ ವಾಚಸ್ಪತಿ 'ಭೃಂಗ ಸಂದೇಶ' ಎಂಬ ಸಂದೇಶಕಾವ್ಯ ಬರೆದಿದ್ದಾನೆ.
'ಪಿಕದೂತ' ಎಂಬ ಕಾವ್ಯದಲ್ಲಿ ಕೋಗಿಲೆ ಸಂದೇಶ ಹೊತ್ತೊಯ್ಯುತ್ತದೆ.
ವಾದಿಚಂದ್ರ ಸೂರಿಯ 'ಪವನದೂತ'ದಲ್ಲಿ ಗಾಳಿ ಸಂದೇಶ ಹೊತ್ತೊಯ್ಯುತ್ತದೆ.
ವಿಕ್ರಮ ಕವಿಯ 'ನೇಮಿದೂತ'ದಲ್ಲಿ ಪರ್ವತವೇ ಸಂದೇಶ ವಾಹಕವಾಗುತ್ತದೆ.
ವೈದ್ಯನಾಥ ಭಟ್ಟನ 'ತುಳಸೀದೂತ' ಕಾವ್ಯದಲ್ಲಿ ತುಳಸಿಯ ಎಲೆ ಸಂದೇಶ ಹೊತ್ತೊಯ್ಯುತ್ತದೆ.

ಮಹಾಕವಿಯೆ, ನಿನ್ನ ಮೇಘದೂತ ಕಾವ್ಯದ ಪಾದಗಳನ್ನು ಮುಟ್ಟಿ ನಮಸ್ಕರಿಸಿ ಕೆಲವರು ಅದನ್ನು ಅನುಸರಿಸಿ ತಮ್ಮದೇ ಕಾವ್ಯವನ್ನು ಕಟ್ಟಿದರು. ನಿನ್ನ ಭಾವದ ಔನ್ನತ್ತ್ಯ ಅರಿತು ನಿನ್ನೊಡನೆ ಸ್ಪರ್ಧಿಸುವ ಮನೋಭಾವದಿಂದ ಬೆನ್ನಟ್ಟಿದ ಕೆಲವರು ಅದೊಂದು ಉತ್ಸಾಹದ ಸವಿಹಬ್ಬ ಮಾತ್ರ ಎಂದುಕೊಂಡರು. ನಿನ್ನ ಮೇಘದೂತ ಕಾವ್ಯ ಗರುಡನ ವಿಶಾಲಗರಿಯ ಎತ್ತರದ ಹಾರಾಟ. ಅದರ ಜೊತೆಗೆ ಸರಿಸಮನಾಗಿ ಹಾರೆಂದು ಯಾರಾದರೂ ಒಂದು ಗುಬ್ಬಿಯನ್ನು ಕಳುಹಿಸುವರೇ? ಅದಕ್ಕೆ ಗರುಡನಿಗೆ ಸಮನಾಗಿ ಗಗನದಲ್ಲಿ ಸಂಚರಿಸಿ ನಲಿದು ನರ್ತಿಸಲು ಆಗುವುದೇ? ಹಾಗೆ ಬೇರೆ ಬೇರೆ ಕವಿಗಳು ತಮ್ಮ ಕಾವ್ಯವೆಂಬ ಹಂಸೆ, ಕ್ರೌಂಚ, ಗಿಳಿ, ಕಾಗೆ, ಕೋಗಿಲೆ, ಬಕ, ನವಿಲು, ಭೇರುಂಡಗಳನ್ನು ಸೃಷ್ಟಿಸಿ ನಿನ್ನ ಗರುಡನಿಗೆ ಸಮನಾಗಿಸಲು ಪ್ರಯತ್ನಿಸಿದರು. ಅವು ನಿನ್ನ ಕಾವ್ಯಕ್ಕೆ ಸಮನಾಗಲು ಸಾಧ್ಯವೇ? ಎಂದು ಕವಿ ಬೇಂದ್ರೆ ಉಪಮಾನಾತ್ಮಕವಾಗಿ ಪ್ರಶ್ನಿಸಿದ್ದಾರೆ.

## 24

**ಭಾಷಾಂತರವಲ್ಲ, ಭಾವಗ್ರಹಣ**

**ಕವಿಯ ಕಮಲ[1] ಕೃತಿಯಲ್ಲಿ ಉಂಡೆ ನಾನೊಬ್ಬ ಭಾವಭೃಂಗ**
**ಪಕಳೆ ಮಾತು ಉದಿರಾಡಬಹುದು, ತುಂಬೀತು ಸ್ವಾಂತರಂಗ ॥**
**ತೋಳು ಗೀಳು ಸಡಿಲೀತು ಪ್ರಿಯರ ಸುಸ್ನಿಗ್ಧ ಬಂಧದಲ್ಲು**
**ಪ್ರಾಣ ತುಂಬುವಾ ಅಧರಪಾನ ಇಳಿದೀತೆ ಉದರದಲ್ಲು?॥**

ಮೇಘದೂತ ಕಾವ್ಯವನ್ನು ಭಾಷೆಯ ಮೂಲಕ ಹಿಡಿಯುವುದೆಂದರೆ ಕಮಲದ ಹೂವಿನ ಪಕಳೆ, ಪಕಳೆಯನ್ನು ಮುಟ್ಟಿ ಆಡಿಸಿದಂತೆ. ಅವುಗಳನ್ನು ಬಿಡಿಬಿಡಿಯಾಗಿ ನೋಡುವಾಗ ಅವು ಉದುರಿ ಹೋದರೆ ಆಕೃತಿ ಸಾಧ್ಯವಿಲ್ಲ. ಶಬ್ದ ಶಬ್ದಗಳ ಅರ್ಥದಲ್ಲಿ ಸಾವಯವ ಸಂಬಂಧವಿರುವುದಿಲ್ಲ. ಹಾಗಾಗಿ ಬೇಂದ್ರೆಯವರದು ಭಾಷಾಂತರವಲ್ಲ.

ಭಾವಾರ್ಥ ಹಿಡಿದು ಸಾಗಿದಾಗ ಆ ಕಾವ್ಯದ ಒಟ್ಟು ಬೆಡಗು, ಬಂಧ, ಲಾವಣ್ಯ ತನ್ನದಾಗಿಸಿಕೊಳ್ಳಲು ಸಾಧ್ಯ. ಆದುದರಿಂದ 'ನಾನೊಬ್ಬ ಭಾವ ಭೃಂಗ'. ದುಂಬಿಯಾಗಿ ಒಂದೊಂದು ಪಕಳೆಗಳಲ್ಲಿ ಕುಳಿತು ಕಮಲದ ಮಧುವನ್ನು ಕುಡಿದು ಆಸ್ವಾದಿಸುತ್ತೇನೆ. ಆಗ ಅದು ಅಂತರಂಗವನ್ನು ತುಂಬುತ್ತದೆ ಎಂದು ತಿಳಿಸಿದ್ದಾರೆ.

---

[1] 'ಕಮಲಕೃತಿ': ಕಮಲ ಎಂಬ ಪದಕ್ಕೆ ಹೂವು ಎಂಬುದರ ಜೊತೆಗೆ ನೀರು, ಬೆಳಕು ಮುಂತಾದ ಅರ್ಥಗಳೂ ಇವೆ. ಆದ್ದರಿಂದ ಕಮಲಕಾವ್ಯವೆಂದರೆ ಜೀವಂತ ಕಾವ್ಯ, ಬೆಳಕಿನ ಕಾವ್ಯ, ಆಧ್ಯಾತ್ಮಿಕ ಕಾವ್ಯ ಎಂಬ ಅರ್ಥಗಳೂ ಬರುತ್ತವೆ. ಯೋಗಶಾಸ್ತ್ರಗಳು ಜ್ಞಾನೋದಯವನ್ನು ಸಹಸ್ರಾರ ಕಮಲದ ಅರಳುವಿಕೆಗೆ ಹೋಲಿಸುತ್ತವೆ.

ಕಾಳಿದಾಸ ಮತ್ತು ಬೇಂದ್ರೆಯವರದು ಸಂಸ್ಕೃತ ಮತ್ತು ಕನ್ನಡದ ಸುಸ್ನಿಗ್ಧ ಬಂಧ. ಹಿತಕರವಾದ ಸಖಸಖಿಯರ ಆಲಿಂಗನದಂತಹದು. 'ಸುಸ್ನಿಗ್ಧ ಬಂಧ' ಮಾರ್ದವತೆ ಹೊಮ್ಮಿ ಕಂಪು ಸೂಸುವ ಆರ್ದ್ರನಂಟು, ಅನುರಾಗ. ಆ ಹಿತಕರ ಬಂಧದಲ್ಲಿ ತೋಳು ಗೀಳು ಸಡಿಲವಾಗಬಹುದು. ಅದು ಹೊರ ತೋರಿಕೆ, ಅಧರಪಾನ ಪ್ರಾಣ ತುಂಬುವ ರೀತಿ ಹೊರನೋಟಕ್ಕೆ ಅಲ್ಲ. ಅದು ಒಡಲಲ್ಲಿ ತುಂಬಿಕೊಂಡಂತಹ ಪ್ರಿಯಬಾಂಧವ್ಯದ ಫಲ. ಹಾಗಾಗಿ ಅವರ 'ಕನ್ನಡ ಮೇಘದೂತ' ಭಾಷಾಂತರವಲ್ಲ, ಭಾವಗ್ರಹಣ.

**ನಮೋ ಎಂಬೆ ಕವಿ ಗುರುವೆ ತಣಿಸಿತೋ, ಅಮರ ದೂತ ಮೇಘಾ**
**ನಿನ್ನ ಇನಿಯಳಂತೆಯೇ ನನ್ನನೂ, ದಿವ್ಯಕಾವ್ಯದೋಘಾ ॥**
**ಇಂದ್ರ ಮಾಯೆಯನು, ಭಾವಛಾಯೆಯನು ನೂರು ಕಡೆಗೆ ಚೆಲ್ಲಿ**
**ಅಮೃತಗರೆವುದಿದು ರಸಿಕ ಹೃದಯದಲಿ, ದಿಗ್ದಿಗಂತದಲ್ಲಿ ॥**



ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ॥ ಗೀತೆ7.11
(ಅರ್ಜುನ, ಜೀವಿಗಳಲ್ಲಿ ಧರ್ಮಕ್ಕೆ ವಿರುದ್ಧವಲ್ಲದ ಕಾಮವು ನಾನಾಗಿದ್ದೇನೆ)

1

**ಒಬ್ಬ ಯಕ್ಷ[1] ತನ್ನೊಡೆಯನಿಂದ ನಲ್ಲೆಯನು[2] ಅಗಲಿ ಬೆಂದು[3]**
**ಶಪಿತ ವರುಷವನು ಕಳೆಯಲಾಗದೇ ಮಹಿಮೆ ಕಳೆದುಕೊಂಡು ॥[4]**
**ಜನಕತನಯೆ ಮಿಂದುದಕಗಳಲ್ಲಿ ತಣ್ಣೆಳಲ ಅಂಗಳಲ್ಲಿ**
**ವಸತಿ ನಿಂದನೋ ರಾಮಗಿರಿಯ ಪುಣ್ಯಾಶ್ರಮಂಗಳಲ್ಲಿ[5]॥**

ಒಬ್ಬ ಯಕ್ಷನು ತನ್ನ ಒಡೆಯ ಕುಬೇರನಿಂದ ಒಂದು ವರ್ಷ ಶಾಪಕ್ಕೆ ಒಳಗಾಗಿದ್ದಾನೆ.

---

[1] ಇಲ್ಲಿ 'ಒಬ್ಬ ಯಕ್ಷ' ಎಂದಷ್ಟೇ ಇದೆ. ಅವನ ಹೆಸರೇನು ಎಂಬುದರ ಉಲ್ಲೇಖವಿಲ್ಲ. ಪುಣ್ಯವಂತರ ಹೆಸರಾದರೆ ಹೇಳಬಹುದು. ಆದರೆ ಶಾಪಗ್ರಸ್ತನ ಹೆಸರನ್ನು, ಅದೂ ಪದ್ಯದ ಪ್ರಾರಂಭದಲ್ಲೇ, ಹೇಳುವುದು ಕವಿಗೆ ಮಂಗಳಕರವೆಂದು ತೋರಿರಲಾರದು. ಅದಕ್ಕಿಂತಲೂ ಮಿಗಿಲಾಗಿ ಬ್ರಹ್ಮನಿಂದ ಅಗಲಿ, ದುಃಖದಲ್ಲಿ ಮುಳುಗಿರುವ ಇಡೀ ಮನುಷ್ಯಕುಲವೇ ಒಂದರ್ಥದಲ್ಲಿ ಶಪಿತ ಕುಲವಾಗಿದೆ. ಯಕ್ಷ ಈ ಮನುಷ್ಯಕುಲವನ್ನು ಪ್ರತಿನಿಧಿಸುತ್ತಾನೆ. ಎಂದ ಮೇಲೆ ಅವನನ್ನು ಪ್ರತ್ಯೇಕವಾಗಿ ಹೆಸರಿಸುವ ಮೂಲಕ ಅವನನ್ನು ಸಕಲರಿಂದ ಪ್ರತ್ಯೇಕಿಸುವುದೇಕೆ? ಸಂಸ್ಕೃತದಲ್ಲಿ 'ಯಕ್ಷ' ಎಂಬ ಪದಕ್ಕೆ ಪೂಜಿಸುವವರು ಎಂಬ ಅರ್ಥವಿದೆ. ಯಕ್ಷರು ಕುಬೇರನ ಪೂಜಕರು, ಸೇವಕರು.

[2] ಇಲ್ಲಿ ಕವಿ ಹೆಂಡತಿ ಎನ್ನದೇ 'ನಲ್ಲೆ' ಎಂಬ ಪದವನ್ನು ಉದ್ದೇಶಪೂರ್ವಕವಾಗಿ ಬಳಸಿದ್ದಾರೆ. ಬೇಂದ್ರೆ ಎಲ್ಲ ಸಂಬಂಧಗಳಿಗಿಂತಲೂ ಸ್ನೇಹ ಸಂಬಂಧಕ್ಕೆ ವಿಶೇಷ ಮಹತ್ವ ನೀಡುತ್ತಾರೆ. ಎಲ್ಲ ಸಂಬಂಧಗಳೂ ಸ್ನೇಹಸಂಬಂಧದೊಳಗೆ ವಿಲೀನವಾಗಬೇಕೆಂಬುದು ಕವಿಯ ಬಯಕೆಯಾಗಿದೆ. ಅವರ ದಾಂಪತ್ಯದ ಬದುಕನ್ನು ನಿರೂಪಿಸುವ ಖಂಡಕಾವ್ಯವನ್ನೂ ಸಹ ಅವರು 'ಸಖೀಗೀತ' ಎಂದೇ ಕರೆಯುತ್ತಾರೆ. ಬೇಂದ್ರೆಯವರಿಗೆ ತುಂಬಾ ಪ್ರಿಯವಾದ ಶಬ್ದ 'ನಲ್'. ಅದನ್ನು ಕುರಿತು ಸಾಹಿತ್ಯದ ವಿರಾಟ್ ಸ್ವರೂಪ (ಪುಟ 190) ದಲ್ಲಿ ಹೀಗೆ ವಿವರಿಸಿದ್ದಾರೆ:

'ನಲ್' ಬೀಜದಿಂದ ನಲಿವು = ಆನಂದ; ನಲುಮೆ = ಪ್ರೀತಿ, ನಲ್ಲ = ಸುಂದರ, ನಾಲಗೆ = ರಸಜ್ಞೆಯಾದ ಜಿಹ್ವೆ; (ನಾನ್ = ಆರ್ದ್ರವಾಗು), ನಲ್ಲೆವಾಲು = ಸವಿಯಾದ ಹಾಲು, ಹೀಗೆ ಶಬ್ದಸಿದ್ಧಿಯಾಗಿದೆ. ನಲ್‌ನಲ್ಲಿ ರಸ, ಪ್ರೀತಿ, ಸೌಂದರ್ಯ, ಆನಂದಗಳು ಅಡಕವಾಗಿದೆ. ಕವಿಯ ಪ್ರತಿಭೆಯು ಪ್ರೀತಿಯ ರೀತಿ, ಕಾವ್ಯ ವಿಷಯವಾದ ಜಗತ್ತೆಲ್ಲ ಸೌಂದರ್ಯವು; ಅವುಗಳ ಅರಿವಿನ ಸಂಗವು ರಸವು; ಇವು ಮೂರಕ್ಕೂ ಆಧಾರವಾಗಿದ್ದುದು ಸೃಷ್ಟಿ ಸ್ಥಿತಿ ಲಯಗಳಿಗೆ ಬ್ರಹ್ಮಭೂತ ಆನಂದ. ಉಪನಿಷತ್ತು ವೇದಗಳಲ್ಲಿ 'ಮಧು' ಶಬ್ದವನ್ನು ಹೀಗೆಯೇ ಬಳಸಿದುದುಂಟು. ಆದರೆ ಅದಕ್ಕೆ ನಲ್ಲದ ಮೇಲ್ಮೆ ಬರಲಾರದು. ಇದರ ಬಣ್ಣ ಬೇರೆ, ಅದರ ಬಣ್ಣ ಬೇರೆ, ಇದರ ಧ್ವನಿ ಅದಕ್ಕೆ ಇಲ್ಲ.

[3] ದಂಪತಿಗಳು ಕೂಡುವುದು ಬೇರಾಗುವುದು ಸಾಮಾನ್ಯ ಆದರೆ ಇಲ್ಲಿ ಯಕ್ಷನಿಗೆ ಇದು ಸಾಮಾನ್ಯ ವಿರಹವಲ್ಲ. ಇದು ಜೀವನ್ಮರಣದ ಪ್ರಶ್ನೆಯಾಗಿದೆ. ಇದನ್ನು ಸೂಚಿಸಲು ಕವಿ 'ಬೆಂದು' ಎಂಬ ಪದ ಬಳಸುತ್ತಿದ್ದಾರೆ. 'ಬೇಯುವಿಕೆ' ಬೇಂದ್ರೆ ಇಷ್ಟಪಟ್ಟು ಬಳಸುವ ಪದಗಳಲ್ಲೊಂದು.

[4] ಅನುವಾದದ ವಿಶೇಷ: ಮೂಲ ಕೃತಿಯಲ್ಲಿ "ಒಬ್ಬ ಯಕ್ಷ ತನ್ನ ಅಧಿಕಾರದಿಂದ ಪ್ರಮತ್ತನಾಗಿ ಶಾಪವನ್ನು ಹೊಂದಿ ತನ್ನ ಮಹಿಮೆ ಕಳೆದುಕೊಂಡ" ಎಂದಿದೆ. ಆದರೆ ಬೇಂದ್ರೆ ತಮ್ಮ ಅನುವಾದದಲ್ಲಿ ಯಕ್ಷನನ್ನು ದೋಷಿಯಂತೆ, ಪ್ರಮತ್ತನಂತೆ, ಶಪಿತನಂತೆ ಬಿಂಬಿಸಿಲ್ಲ. ಬೇಂದ್ರೆಯಲ್ಲಿ ಯಕ್ಷನು ಕಳೆಯುತ್ತಿದ್ದ ವರ್ಷಗಳು ಶಾಪಗ್ರಸ್ತ ವರ್ಷಗಳೇ ವಿನಾ ಸ್ವಯಂ ಯಕ್ಷನೇ ಶಾಪಗ್ರಸ್ತನಲ್ಲ ಎಂಬ ಭಾವವಿದೆ.
ಅಲ್ಲದೇ ಅವನು ಮಹಿಮೆ ಕಳೆದುಕೊಂಡಾಗಲೇ ಕಾವ್ಯಕ್ಕೆ ಮಾನುಷ ಸ್ಪರ್ಶ ಸಿಗುವುದು. ಇಲ್ಲದೇ ಹೋದಲ್ಲಿ ಅವನಿಗೆ ಮೇಘದ ಅಥವಾ ಸಂದೇಶದ ಅಗತ್ಯವೇ ಇರುತ್ತಿರಲಿಲ್ಲ. ತಾನೇ ನೇರವಾಗಿ ಹಾರಿಕೊಂಡು ಹೋಗಿ ತನ್ನ ಪತ್ನಿಯನ್ನು ಕಂಡು ಬಂದಿರುತ್ತಿದ್ದ.

[5] ಅವನು ಪಾಪಿಯಾದರೂ ಶಾಪಗ್ರಸ್ತನಾದರೂ ಅವನು ನಿಂತಿರುವ ಜಾಗ ಶಪಿತ ಜಾಗವಲ್ಲ. ಅದು

ಅಲಕಾವತಿಯಿಂದ ಬಹಿಷ್ಕೃತನಾಗಿದ್ದಾನೆ. ಆ ಆಜ್ಞೆಯಂತೆ ನಲ್ಲೆಯಿಂದ (ಪ್ರೀತಿಯ ಪತ್ನಿಯಿಂದ) ದೂರವಾಗಿದ್ದಾನೆ. ಶಪಿತ ವರ್ಷವನು ಕಳೆಯಲಾಗದೆ ತನ್ನ ಮಹಿಮೆಯನ್ನು ಕಳೆದುಕೊಂಡಿದ್ದಾನೆ. ದೂರದ ವಿಂಧ್ಯ ಪರ್ವತದ ರಾಮಗಿರಿಗೆ ಬಂದು ಜನಕತನಯೆ ಸೀತಾದೇವಿ ಮಿಂದು ಮಡಿಯಾದ ನದಿಯ ತಣ್ಣನೆಯ ಅಂಗಳದಲ್ಲಿ ವಸತಿ ಹೂಡಿದ್ದಾನೆ.

2

**ಅಗಲಿ ಇದ್ದರೂ ಆಸೆಗೊಂಡಿರಲು ಗಿರಿಯೊಳಂತು ಇಂತು**
**ಕೆಲವೆ ತಿಂಗಳಲಿ ಚಿನ್ನ ಕಡಗ ಮೊಳಕೈಗೆ ಸರಿದು ಬಂತು ॥[1]**
**ಕಾರಹುಣ್ಣಿವೆಯ ಮಾರನೆಯ ದಿನವೆ ಮೋಡ ಕೋಡನಪ್ಪಿ[2]**
**ಕಂಡಿತೊಡ್ಡಿನೊಡ ಡಿಕ್ಕಿಯಾಡುವಾ ಆನೆ ಬೆಡಗನೊಪ್ಪಿ ॥**

ಆ ಯಕ್ಷನು ಸತಿಯಿಂದ ಅಗಲಿದ್ದರೂ ಅವಳನ್ನು ಮತ್ತೆ ಕೂಡುವ ಆಸೆಯಿಂದ ಆ ಗಿರಿಯಲ್ಲಿ ಹಾಗೋ ಹೀಗೋ ದಿನ ಕಳೆಯುತ್ತಿದ್ದಾನೆ. ಹಾಗೆ ಕೆಲವು ತಿಂಗಳು

---

ಸೀತೆ ಸ್ನಾನ ಮಾಡಿ ಪವಿತ್ರಗೊಳಿಸಿರುವ ರಾಮಗಿರಿಯ ಪುಣ್ಯಕ್ಷೇತ್ರವಾಗಿದೆ, ತಣ್ಣೆಳಲಾಗಿದೆ. ಆದ್ದರಿಂದ ಇದು ಪಾಪಿಯ ಅಥವಾ ಶಾಪಗ್ರಸ್ತನ ಕತೆಯಲ್ಲ, ಇದು ಪುಣ್ಯಕತೆಯಾಗಿದೆ ಎಂದು ಕವಿ ಮೊದಲಿಗೇ ಸೂಚಿಸುತ್ತಿದ್ದಾರೆ.
ಇಂದಿನ ಬುಂದೇಲ್‌ಖಂಡ್‌ನಲ್ಲಿರುವ ಚಿತ್ರಕೂಟವನ್ನೇ ಕವಿ ಇಲ್ಲಿ ರಾಮಗಿರಿ ಎಂದು ಕರೆಯುತ್ತಿರುವುದು. ರಾಮ ವಾಸಿಸುತ್ತಿದ್ದರಿಂದ ಇದು 'ರಾಮಗಿರಿ'ಯಾಗಿದೆ.
ವಿರಹದಿಂದ ನೊಂದಿದ್ದ ಯಕ್ಷನಿಗೆ ನಿಂತಲ್ಲಿ ನಿಲ್ಲಲಾಗುತ್ತಿರಲಿಲ್ಲ. ಒಂದು ಆಶ್ರಮದಿಂದ ಇನ್ನೊಂದು ಆಶ್ರಮಕ್ಕೆ ಚಡಪಡಿಕೆಯಿಂದ ಅಲೆದಾಡುತ್ತಲೇ ಇದ್ದ. ಈ ಹಿನ್ನೆಲೆಯಲ್ಲಿ ಬೇಂದ್ರೆ 'ಪುಣ್ಯಾಶ್ರಮಂಗಳಲ್ಲಿ' ಎಂಬ ಬಹುವಚನವನ್ನು ಸರಿಯಾಗಿಯೇ ಪ್ರಯೋಗಿಸಿದ್ದಾರೆ.

[1] ಪ್ರಿಯರನ್ನು ಅಗಲಿದಾಗ ಒಡವೆ ವಸ್ತುಗಳು ಬೇಡವೆನಿಸುತ್ತದೆ. ಆದರೆ ಇಲ್ಲಿ ಯಕ್ಷ ತನ್ನ ಚಿನ್ನದ ಕಡಗವನ್ನು ತಾನಾಗೇ ಬಿಚ್ಚುತ್ತಿಲ್ಲ. ಅವಳ ಚಿಂತೆಯಲ್ಲಿ ಅವನು ದುರ್ಬಲನಾಗುವ ಕಾರಣ ಚಿನ್ನದ ಕಡಗ ತಾನಾಗೇ ಸರಿದು ಬರುತ್ತಿದೆ. ಅವಳ ಅಗಲಿಕೆ ಅವನ ಮನಸ್ಸಿನ ಮೇಲಷ್ಟೇ ಅಲ್ಲ, ಶರೀರದ ಮೇಲೂ ಪರಿಣಾಮ ಉಂಟುಮಾಡುತ್ತಿದೆ. ಮೇಘದೂತದಲ್ಲಿಯ 'ಕನಕವಲಯ ಭ್ರಂಶರಿಕ್ತ, ಪ್ರಕೋಷ್ಠ'ವನ್ನು ಬೇಂದ್ರೆಯವರು ಅನುವಾದದಲ್ಲಿ 'ಚಿನ್ನಕಡಗ ಮೊಳಕೈಗೆ ಸರಿದು ಬಂತು' ಎಂದು ಚಿತ್ರವತ್ತಾಗಿ ನೀಡಿದ್ದಾರೆ. ಅದು ವಿರಹಾವಸ್ಥೆಯಲ್ಲಿ ಕ್ಷೀಣಿಸಿದ ಅವನ ದೇಹಸ್ಥಿತಿಯನ್ನು ಸಮರ್ಥವಾಗಿ ದೃಗ್ಗೋಚರವಾಗುವಂತೆ ಧ್ವನಿಸುತ್ತದೆ.

[2] ಮಳೆಗಾಲ ಸಮಸ್ತ ಜೀವರಾಶಿಯೂ ಸೃಷ್ಟಿಕ್ರಿಯೆಯಲ್ಲಿ ತೊಡಗುವ ಸಮಯವಾಗಿದೆ. ಇಂತಹ ಋತುಮಾನದಲ್ಲಿ ತಾನು ಮಾತ್ರ ನಲ್ಲಳಿಂದ ಬೇರಾಗಿದ್ದೇನೆ ಎಂಬ ಬೇಗುದಿ ಯಕ್ಷನದು. ಹಿಂದೂ ಪಂಚಾಂಗದ ಪ್ರಕಾರ ಶ್ರಾವಣ ಮಾಸದಲ್ಲಿ ಮಳೆಗಾಲ (ವರ್ಷ ಋತು) ಪ್ರಾರಂಭವಾಗುತ್ತದೆ. ಇನ್ನೂ ಮಳೆಗಾಲಕ್ಕೆ ಒಂದು ತಿಂಗಳು ಬಾಕಿ ಇದೆ. ಆದಾಗ್ಯೂ ಅವನಿಗೆ ಮೋಡಗಳ ದರ್ಶನವಾದುದರಿಂದ ಅವಳ ನೆನಪು, ಜೊತೆಗೆ ದುಃಖ ಬೇಗುದಿ ಉಂಟಾಗುತ್ತಿದೆ. ಬೇಂದ್ರೆಯವರು ಆ ದಿನವನ್ನು ಧಾರವಾಡದ ದೇಸಿ ಸೊಬಗಿನಲ್ಲಿ 'ಕಾರಹುಣ್ಣಿಮೆಯ ಮಾರನೆಯ ದಿನ' ಎಂದು ಕರೆದಿದ್ದಾರೆ. ಅದು ಸಂಸ್ಕೃತದ 'ಆಷಾಡಸ್ಯ ಪ್ರಥಮ ದಿವಸೇ' ಕನ್ನಡ ಸಂಸ್ಕೃತಿಯಲ್ಲಿ ಉಸಿರಾಡಿದಂತಿದೆ.

ಕಳೆಯುವಷ್ಟರಲ್ಲಿ ವಿರಹ ವ್ಯಥೆಯಿಂದಾಗಿ ಅವನ ದೇಹ ಸೊರಗಿದೆ. ಅವನ ಮುಂಗೈಯ ಚಿನ್ನದ ಕಡಗ ಮೊಳಕೈಗೆ ಸರಿದು ಬಂದಿದೆ. ಹಾಗೆ ಎಂಟು ತಿಂಗಳು ಕಳೆದು ಹೋಗಿದೆ. ಅವನು ನವದಂಪತಿಗಳ ವಿರಹ ಮಾಸವಾದ ಆಷಾಢದ ಮೊದಲ ದಿನ ತನ್ನ ಪ್ರಿಯೆಯನ್ನು ನೆನೆದು ಆಕಾಶಮುಖಿಯಾಗಿ ನೋಡಿದನು. ಒಂದು ಮೋಡ ಗಿರಿಶಿಖರದ ಕೋಡನ್ನು ಅಪ್ಪಿಕೊಂಡಿದೆ. ಅದು ಒಡ್ಡಿನೊಡನೆ ಡಿಕ್ಕಿಯಾಡುವ ಆನೆಯಂತಿದ್ದು ಅದೊಂದು ಬೆಡಗಾಗಿದೆ.

3

**ಮೋಡ ನೋಡಿ ಮನಸಾಗಿ ನಿಂತನೋ ಹೇಗೋ ಏನೊ ಕಂಡು**
**ರಾಜರಾಜನನುಚರನು[1] ಇದ್ದ ಕಣ್ಣೀರ ನುಂಗಿಕೊಂಡು ॥[2]**
**ಮೋಡ ಕಂಡೊಡನೆ ಬೇರೆ ಬಗೆಯಹುದು ಸುಖಿಗು ಎಂತೊ ಏಕೋ[3]**
**ಕೊರಳ–ಗೆಳತಿ ದೂರುಳಿದ ಮೇಲೆ ಆ ಗತಿಯ ಹೇಳಲೇಕೋ ॥[4]**

ಯಕ್ಷನು ನೋಡುತ್ತಾ ಅದರ ಕಡೆಗೆ ಆಕರ್ಷಿತನಾಗಿ ನಿಂತನು. ಅದನ್ನು ಮನಸ್ಸಿನಲ್ಲಿ ಹೇಗೋ ಏನೋ ಭಾವಿಸಿಕೊಂಡನು. ರಾಜರಾಜನ ಅನುಚರನಾದ ಅವನು ವಿರಹದ ಕಣ್ಣೀರನ್ನು ನುಂಗಿಕೊಂಡನು. ಮೋಡವನ್ನು ಕಂಡ ತಕ್ಷಣ ತನ್ನ ಕೊರಳ ಗೆಳತಿ ದೂರ ಉಳಿದಿರುವ ಸ್ಥಿತಿಯನ್ನು ನೆನೆದನು. ಅವಳ ಆ ವಿರಹ ಗತಿಯನ್ನು ವ್ಯಕ್ತಪಡಿಸಲು ಮನಸ್ಸು ತುಡಿಯಿತು.

---

ಯಕ್ಷನಿಗೆ ಮೋಡ ಆನೆಯ ರೂಪದಲ್ಲಿ ಕಾಣಿಸುತ್ತಿದೆ. ನಾನಾ ಆಕಾರಗಳನ್ನು ತಳೆಯಬಲ್ಲ ಮೋಡದಿಂದಾಗಿ ಯಕ್ಷನ ಕಲ್ಪನೆಯ ಗರಿಗೆದರುತ್ತದೆ. ಆನೆಯ ಉಪಮೆ ಅವನ ಕಲ್ಪನೆಯ ಗಾತ್ರ(ಮ್ಯಾಗ್ನಿಟ್ಯೂಡ್)ವನ್ನು ಪರಿಚಯಿಸುತ್ತದೆ.

[1] ಕುಬೇರನನ್ನೇ ಇಲ್ಲಿ 'ರಾಜರಾಜ' ಎಂದು ಕರೆಯಲಾಗಿದೆ

[2] ಅವನು ಕಣ್ಣೀರು ನುಂಗಿಕೊಳ್ಳಲು ಕಾರಣವಿದೆ. ಎಂತಹ ಅಲೆಮಾರಿಯಾದರೂ ಮಳೆಗಾಲದಲ್ಲಿ (ಚಾತುರ್ಮಾಸ್ಯದಲ್ಲಿ) ತನ್ನ ಬೆಚ್ಚನೆಯ ಗೂಡು ಸೇರುತ್ತಾನೆ. ಹೆಂಡತಿ ಮಕ್ಕಳು ಕುಟುಂಬದೊಂದಿಗೆ ಕಾಲ ಕಳೆಯುತ್ತಾನೆ. ಯಕ್ಷ ಮೋಡಗಳನ್ನು ನೋಡಿದಾಗ "ಇಂತಹ ಮಳೆಗಾಲದಲ್ಲಿ ನಾನು ಮಾತ್ರ ಅವಳನ್ನು ಅಗಲಿದ್ದೇನೆ" ಎಂಬ ದುಃಖ ಸಹಜವಾಗಿಯೇ ಅವನಲ್ಲಿ ಉಲ್ಬಣಿಸುತ್ತದೆ.

[3] ಬೇಸಿಗೆಯ ಬೇಗೆ ಕಳೆದು ಮಳೆಗಾಲ ಪ್ರಾರಂಭವಾಗುವಾಗ ಮೋಡವು ರಸಿಕನಾದವನಿಗೆ ಸುಖಾನುಭವ ನೀಡುತ್ತದೆ. ಆದರೆ ಆ ಮೋಡ ರಸಿಕನಾದ ಯಕ್ಷನಿಗೆ ಸುಖಾನುಭವ ನೀಡುತ್ತಿಲ್ಲ, ಅವನಿಗೆ 'ಬೇರೆಯ ಬಗೆ' ಆಗುತ್ತಿದೆ.

[4] ತನಗೇ ಹೀಗಾಗುತ್ತಿರಬೇಕಾದರೆ ಇನ್ನು ಅಲ್ಲಿರುವ ನಲ್ಲೆಗೆ ಇನ್ನೆಷ್ಟು ದುಃಖವಾಗಿರಬೇಡ ಎಂಬ ಭಾವದಿಂದ ಅವನು ಕಣ್ಣೀರು ನುಂಗಿಕೊಳ್ಳುತ್ತಾನೆ.

4

**ಬಂತು ಶ್ರಾವಣಾ ಎಂತು ಬದುಕುವಳೊ ಮಡದಿ ಜೀವ ಉಳಿಸಿ[1]**
**ಮೋಡದೊಡನೆ ತನ್ನೊಳಿತಿನೊಸಗೆಯನು ಅಂತೆ ಕಳಿಸಲೆಳಸಿ ॥**
**ಬೆಟ್ಟ-ಮಲ್ಲಿಗೆಯ ಹೊಚ್ಚ ಹೂವಿನೊಡ ಕಾಲನೀರ ನೀಡಿ[2]**
**ಇದಿರುಗೊಂಡು ಬರಮಾಡಿಕೊಂಡ ಒಲಿದೊಲಿವ ಮಾತನಾಡಿ ॥[3]**

ಶ್ರಾವಣ ಬರುತ್ತಿದೆ, ಮಡದಿ ಹೇಗೆ ಜೀವ ಉಳಿಸಿ ಬದುಕುವಳೋ ತಿಳಿಯದು. ಅವಳಿಗೆ ಮೋಡದ ಮುಖಾಂತರ ತನ್ನ ಒಳಿತಿನ ಶುಭ ಸಮಾಚಾರವನ್ನು ಕಳುಹಿಸುವ ಬಗ್ಗೆ ಆಲೋಚಿಸಿದನು. ಮುಗಿಲಿನಲ್ಲಿ ಕಂಡ ಮೋಡದ ಪಾದಗಳನ್ನು ನೀರಿನಿಂದ ತೊಳೆದು ಬೆಟ್ಟ ಮಲ್ಲಿಗೆ ಹೊಚ್ಚ ಹೂವನ್ನು ಇಟ್ಟು ಇದಿರುಗೊಂಡನು. ಒಲಿದು ಒಲಿಯುವ ಮಾತಿನಿಂದ ಬರಮಾಡಿಕೊಂಡನು.

5

**ಗಾಳಿ-ನೀರು-ಉಗೆ-ಬೆಂಕಿಗೂಡಿ ಆಗಿರುವ ಮೇಘವೆತ್ತ[4]**
**ಎತ್ತ ಮಾತುಗಳು? ಮೋಡ ಜೀವವೇ? ಏನೊ ಎತ್ತೊ ಚಿತ್ತ ॥[5]**
**ಭೇದವೆಣಿಸದೆಯೆ ಕಂಡ ಮೋಡವನೆ ಬೇಡಿಕೊಂಡ ತಾನು**
**ಜಡವೊ ಚೇತನವೊ ಬಯಕೆ ಮರುಳರಿಗೆ ಯಾವ ವಸ್ತುವೇನು? ॥**

ಗಾಳಿ ನೀರು ಉಗೆ ಬೆಂಕಿಗಳು ಸೇರಿ ಮೋಡ ಆಗಿರುವುದು. ಅದರೊಡನೆ ನನ್ನ ಮಾತುಗಳೇನು ಮಾಡುವವು (ಅದರೊಂದಿಗೆ ಯಾರಾದರೂ ಮಾತನಾಡುವರೇ?)? ಮೋಡ ಜೀವವೇ? ಎಂದು ಯಕ್ಷನ ಚಿತ್ತ ಹೇಗೇಗೋ ಏನೇನೋ ಯೋಚಿಸಿತು.

---

[1] ಶ್ರಾವಣದಲ್ಲಿ ಪ್ರೇಮಿಗಳು ಅಗಲಿ ಇರುವುದು ಬಹಳ ಕಷ್ಟ. ಏಕೆಂದರೆ ಬೇಸಿಗೆ ಕಳೆದು ಆಷಾಢದ ಮಳೆ ಬಿದ್ದು ಎಲ್ಲವೂ ತಂಪಾಗುವುದರಿಂದ ಸುಖಾನುಭವಕ್ಕೆ ಅದು ಅತ್ಯಂತ ಪ್ರಶಸ್ತವಾದ ಹವಾಮಾನವಾಗಿದೆ. ಇಂತಹ ವಾತಾವರಣದಲ್ಲಿ ಅವಳು ಹೇಗೆ ಬದುಕಿರುವಳೋ ಎಂದು ಆತಂಕ ಪಟ್ಟ.

[2] ಬೆಟ್ಟ ಮಲ್ಲಿಗೆ ಆ ಕಾಲಮಾನದಲ್ಲಿ (ಅಂದರೆ ಆಷಾಢ ಮಾಸದಲ್ಲಿ) ಅರಳುವ ಅಪರೂಪದ ಹೂವಿರಬೇಕು. ಆದ್ದರಿಂದಲೇ ಅದನ್ನು ಮೋಡನಿಗೆ ಅರ್ಪಿಸಿದ. ಮೋಡನನ್ನು ಸೇವಕನಂತೆ, ದೂತನಂತೆ ಬಳಸಿಕೊಳ್ಳದೇ ದೇವರಂತೆ ಪೂಜಿಸಿ ಅವನಿಂದ ತನ್ನ ಮನೋಭಿಲಾಷೆಯನ್ನು ಈಡೇರಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾನೆ. ಇದು ಯಕ್ಷನ ಸಭ್ಯತೆ, ವಿನಯಶೀಲತೆಗಳನ್ನು ತೋರಿಸುವ ಒಂದು ನಡೆಯಾಗಿದೆ.

[3] ಇವನಿಂದ ನನ್ನ ಕೆಲಸ (ನಲ್ಲೆಗೆ ಸಂದೇಶವನ್ನು ಕಳುಹಿಸುವ ಕೆಲಸ) ಈಡೇರಬಹುದು ಎಂದು ಊಹಿಸಿ ಒಲಿದ, ಮಾತನಾಡಿ ಒಲಿಸಿಕೊಂಡ.

[4] ಈ ಸಾಲಿನಲ್ಲಿ ಆಷಾಢದ ಮೋಡದ ವರ್ಣನೆ ಇದೆ. ಆಷಾಢದ ಮೋಡ ಬಹಳ ನಿಬಿಡವಾಗಿರುತ್ತದೆ. ಮಿಂಚು ಗುಡುಗುಗಳಾಗುತ್ತಿರುತ್ತವೆ. ಬೀಸುವ ಗಾಳಿಯೊಡನೆ ಅದು ಮನೋಹರವಾಗಿ ಸಾಗುತ್ತಿರುತ್ತದೆ. ಅದನ್ನು ನೋಡುವುದೇ ಒಂದು ಆನಂದ.

[5] ದುಃಖಾರ್ತನಾದ ಯಕ್ಷ ಜಡ-ಚೇತನ ವಸ್ತುಗಳ ನಡುವಿನ ವ್ಯತ್ಯಾಸವನ್ನೇ ಕಳೆದುಕೊಂಡಿದ್ದಾನೆ.

ಬಯಕೆಯಿಂದ ಮರುಳಾಗಿದ್ದ ಅವನು ಕೊನೆಗೆ ಜಡ ಚೇತನವೆನ್ನುವ ಭೇದವನ್ನು ಎಣಿಸದೆ ತಾನು ಕಂಡ ಮೋಡವನ್ನೇ ಹೀಗೆ ಬೇಡಿಕೊಂಡನು.

6

**ಪುಷ್ಕರಾದಿ[1] ಜಗ ಬಲ್ಲ ವಂಶದವನಲ್ಲೆ, ಬಲ್ಲೆ ನಾನು**
**ಕಾಮರೂಪಿಯೇ ಪ್ರಕೃತಿಪುರುಷನೋ ಇಂದ್ರನಲ್ಲಿ ನೀನು ॥[2]**
**ದೈವ ಬಂಧು ನೀ. ಬೇಡೆ ಕೆಡುಕರಲಿ. ಬಯಕೆಗೂಡಿಯೇನು?**
**ಲೇಸು ಒಳ್ಳೆವರ ಬೇಡಿಕೊಂಬುದೇ ವ್ಯರ್ಥವಾದರೂನು ॥[3]**

"ಓ ಮೋಡವೇ ನೀನು ಜಗತ್ತು ಬಲ್ಲ ಪುಷ್ಕರ ಮುಂತಾದ ವಂಶದವನೆಂಬುದು ಗೊತ್ತು. ಕಾಮರೂಪಿಯೇ, ನೀನು ಇಂದ್ರನಲ್ಲಿ ಪ್ರಕೃತಿ ಪುರುಷ. ನೀನು ದೈವಬಂಧು. ನಾನು ಕೆಡುಕರಲ್ಲಿ ಬೇಡಿಕೊಳ್ಳುವುದಿಲ್ಲ. ಅಂತಹವರಿರಂದ ಬಯಕೆ ಕೈಗೂಡಿದರೆ ಪ್ರಯೋಜನವೇನು? ವ್ಯರ್ಥವಾದರೂ ಒಳ್ಳೆಯವರನ್ನು ಬೇಡಿಕೊಳ್ಳುವುದೇ ಲೇಸು".

7

**ನೀರೆ ಕಾದವಗೆ[4] ಶರಣು[5] ಅಲ್ಲವೇ? ಇನಿಯಳೆಡೆಗೆ ಓತು**
**ಒಯ್ಯೋ ಧನಪತಿಯ ಮುನಿಸಿಗೀಡಾಗಿ ಅಗಲಿದವನ ಮಾತು**
**ಯಕ್ಷರಾಜನಾ ರಾಜಧಾನಿ ಅಲಕೆಗೆಯೆ[6] ಹೋಗು ನೀನು**
**ಅಲ್ಲಿ ಶಿವನ ಮುಡಿಚಂದ್ರ ತೊಳೆವ ಮಹಮನೆಯ[7] ಮಾಟವೇನು?**

---

[1] ಕಾಳಿದಾಸ 'ಪುಷ್ಕರಾವರ್ತ' ಎಂಬ ಪದ ಬಳಸಿದ್ದಾನೆ. ಪುಷ್ಕರವೆಂದರೆ ನೀರು. ಆವರ್ತ ಎಂದರೆ ಆವರಿಸುವ, ವ್ಯಾಪಿಸುವ. ನೀರು ತುಂಬಿದ ಮೋಡ ಎಂಬ ಅರ್ಥವಿದೆ. ಪ್ರಲಯ ಕಾಲದಲ್ಲಿ ಪುಷ್ಕರ ಮತ್ತು ಆವರ್ತ ಎಂಬ ಎರಡು ಬಗೆಯ ಮೋಡಗಳು ಗಗನ ಮಂಡಲವನ್ನು ವ್ಯಾಪಿಸುತ್ತವೆ ಎಂದು ಮಲ್ಲಿನಾಥ ವ್ಯಾಖ್ಯಾನಿಸಿದ್ದಾನೆ.

[2] ನೀನು ಇಂದ್ರನಿಗೆ ಅಂದರೆ ಮಳೆ ಸುರಿಸುವ ದೇವರಿಗೆ ಪ್ರಕೃತಿ ಪುರುಷನಾಗಿರುವೆ, ರಾಯಭಾರಿಯಾಗಿರುವೆ. ಇಂದ್ರ ಮಳೆಯನ್ನು ಮೋಡಗಳ ಮೂಲಕವೇ ಸುರಿಸುವುದರಿಂದ ಅವನು ಇಂದ್ರನಿಗೆ ರಾಯಭಾರಿಯಾಗಿದ್ದಾನೆ.

[3] ಇಲ್ಲಿ ಯಕ್ಷ ಕಾಮ ಪೀಡಿತನಾಗಿರುವನಾದರೂ ಕಾಮದಿಂದ ವಿವೇಕದ ಕಣ್ಣನ್ನು ಕುರುಡಾಗಿಸಿಕೊಂಡಿಲ್ಲ, ಭ್ರಷ್ಟನಾಗಿಲ್ಲ. ಕೆಡುಕರಲ್ಲಿ ಬೇಡಲಾರೆ ಎಂಬ ಮಾತುಗಳಿಂದ ಯಕ್ಷನ ವಿವೇಕ, ಸೌಜನ್ಯಗಳು ವ್ಯಕ್ತವಾಗುತ್ತವೆ.

[4] ಕಾದವಗೆ: ಬಿಸಿಲಿನಿಂದ ಬಾಡಿದವರಿಗೆ, ವಿರಹದಿಂದ ಬೆಂದವರಿಗೆ,

[5] ಆಶ್ರಯವಾಗಿದೆ.

[6] ಅಲಂಕೃತವಾದ ನಗರ ಅಲಕಾ. ಅಲಕಾ ನಗರಕ್ಕೆ ವಸುಧಾರಾ, ವಸುಸ್ಥಲೀ, ಪ್ರಭಾ ಮುಂತಾದ ಹೆಸರುಗಳಿವೆ. ಪುರಾಣಗಳ ಪ್ರಕಾರ ಇದು ಕೈಲಾಸದ ಆಚೆಗಿದೆ. ಇದು ಕುಬೇರನ ರಾಜಧಾನಿ.

[7] ಕಾಳಿದಾಸನ 'ಬಾಹ್ಯೋದ್ಯಾನ' ಎಂಬ ಪದವನ್ನು ಬೇಂದ್ರೆ 'ಮಹಮನೆ' ಎಂದು ಕನ್ನಡಿಸಿದ್ದಾರೆ. ಚಿತ್ರರಥನೆಂಬ ಯಕ್ಷ ನಿರ್ಮಿಸಿದ ಕುಬೇರನ ಈ ಬಾಹ್ಯೋದ್ಯಾನ ಬಹುರಮ್ಯವಾದುದು. ಅಲ್ಲಿಗೆ ಶಿವ ಆಗಾಗ ಹೋಗಿ ವಿಶ್ರಾಂತಿ ಪಡೆಯುತ್ತಾನೆ ಎಂಬುದು ಪೌರಾಣಿಕ ನಂಬಿಕೆ. ಅಲ್ಲಿಗೆ ಶಿವ ಹೋದಾಗಲೆಲ್ಲ ಅವನ ಮುಡಿಯ ಚಂದಿರನ ಬೆಳದಿಂಗಳಿನಿಂದ ಇಡೀ ಅಲಕಾಪಟ್ಟಣ ಅಲೌಕಿಕ ಬೆಳಕಿನಿಂದ ಜಗಮಗಿಸುತ್ತಿರುತ್ತದೆ.

"ನಾನು ಧನಪತಿ ಕುಬೇರನ ಮುನಿಸಿಗೀಡಾಗಿ ಪತ್ನಿಯಿಂದ ಅಗಲಿದವನು. ಆ ನನ್ನ ಇನಿಯಳ ಬಳಿಗೆ ನನ್ನ ಮಾತನ್ನು ಪ್ರೀತಿಯಿಂದ ಕೊಂಡೊಯ್ಯಿ. ನನ್ನ ನೀರೆ ನಿನಗಾಗಿ ಕಾಯುತ್ತಿರುವಳು. ನಿನಗೆ ಶರಣು (ನೀನೇ ನನಗೆ ಆಶ್ರಯ). ನೀನು ಯಕ್ಷರಾಜನ ಅಲಕಾಪಟ್ಟಣಕ್ಕೆ ಹೋಗು. ಅಲ್ಲಿ ಶಿವನ ಮುಡಿಯ ಚಂದ್ರನಿಂದ ತೊಳೆದು ಬೆಳಗುವ ಆ ಅರಮನೆಯ ಸೊಬಗಿನ ಮಾಟ ಎಂತಹುದು ಎನ್ನುವುದನ್ನು ನೋಡಿ ನಲಿ".

8

**ಗಾಳಿ ಬಟ್ಟೆಯಲಿ ಬರವ ಕಂಡು ಕುರುಳೋಳಿ ಓರೆ ಮಾಡಿ**[1]
**ದೂರ ಹೋದವರ ಹೆಣ್ಣು ನೋಡುವವು ನಿನ್ನನಾಸೆ ಗೂಡಿ ॥**
**ನೀನೆ ಬರಲು ಅವನಾವನಿರುವನೋ ನಲ್ಲೆ ಬಿಟ್ಟುಗೊಟ್ಟು,**
**ಬೇರೆಯವರ ಆಳಾಗಿ ಇರುವ ನಮ್ಮಂಥ ಜನರ ಬಿಟ್ಟು ॥**

ನೀನು ಗಾಳಿ ಹಾದಿಯಲ್ಲಿ ಬರುವುದನ್ನು ಕಂಡು ಹೆಣ್ಣುಜೀವಗಳು ತಲೆಗೂದಲನ್ನು ಓರೆ ಮಾಡಿಕೊಂಡು (ತಮ್ಮ ಗಂಡಂದಿರ ಬರವನ್ನು) ನೋಡುವರು. ನೋಡುವಷ್ಟರಲ್ಲಿ ನೀನು ದೂರಕ್ಕೆ ಸಾಗಿರಲು ಆಸೆಗೊಂಡು ಮತ್ತೆ ಮತ್ತೆ ತದೇಕಚಿತ್ತದಿಂದ ನೋಡುವರು! ನೀನು ಬರುವಾಗ ನಲ್ಲೆಯರೊಡಗೂಡಿ ನಿನ್ನನ್ನು ಈಕ್ಷಿಸದೆ ಇರುವವರು ಯಾರೊ? ಓಹ್, ಹಾಗೆ ರಸಿಕ ಆನಂದಕ್ಕೆ ಹೊರತಾದವರು, ಬೇರೆಯವರ ಆಳಾಗಿ ದುಡಿವ ನಮ್ಮಂಥ ಜನರು ಮಾತ್ರ!

9

**ಗಾಳಿ ಬೀಸುವುದು ನಿನ್ನ ನೂಕಿಸುತ ಮಂದ ಮಂದವಾಗಿ**
**ಚೂಚು ಚಾಚಿ ಚಾದಗೆಯು, ಎಡಕೆ ಕೂಗುವದು ಚಂದವಾಗಿ ॥**
**ಬೆದೆಯ ನೆನೆದು ಬೆಳ್ಳಕ್ಕಿ ಬರುವವೋ ಸಾಲು ಸಾಲುಗೊಂಡು**
**ಬೆನ್ನಗಟ್ಟುವವು ಕಣ್ಗೆ ಸೊಬಗ ನೀ ತಂದೆ ಎಂದುಕೊಂಡು ॥**[2]

---

[1] ಮೂಲದಲ್ಲಿರುವ 'ಉದ್ ಗೃಹೀತಾ ಅಲಕಾನಾಮಂತಾ ಯಾಭಿಃ' ಎಂಬ ಸಾಲನ್ನು ಬೇಂದ್ರೆಯವರು 'ಕುರುಳೋಳಿ ಓರೆ ಮಾಡಿ' ಎಂದು ಅನುವಾದಿಸಿದ್ದಾರೆ. "ಅವರು ಶೀಲವಂತರಾದ ಹೆಂಗಸರು, ಅವರ ಗಂಡಂದಿರು ದೂರದಲ್ಲಿದ್ದಾರೆ, ಗಾಳಿಗೆ ಹರಿದಾಡುವ ಅವರ ಕೂದಲನ್ನು ನೇವರಿಸಬೇಡ, ಬಾಚಬೇಡ. ಅವರ ಗಂಡಂದಿರು ಬರುವವರೆಗೂ ಅದು ಗಾಳಿಗೆ ಹಾರಿಕೊಂಡೇ ಇರಲಿ ಬಿಟ್ಟುಬಿಡು ಎಂದು ಯಕ್ಷ ಮೋಡಕ್ಕೆ ಸೂಚಿಸುತ್ತಿದ್ದಾನೆ" ಎಂದು ಮಲ್ಲಿನಾಥ ಈ ಸಾಲನ್ನು ವ್ಯಾಖ್ಯಾನಿಸಿದ್ದಾನೆ. ಈ ಭಾವ ಬೇಂದ್ರೆಯಲ್ಲಿಲ್ಲ. ಮೂಲದಲ್ಲಿರುವ 'ಅಲಕಾ' ಎಂಬ ಪದಕ್ಕೆ ಕುಬೇರನ ರಾಜಧಾನಿ ಎಂಬ ಅರ್ಥವಿರುವ ಜೊತೆಗೆ ಗಾಳಿಗೆ ಹರಿದಾಡುವ ಕೂದಲು ಎಂಬ ಅರ್ಥವೂ ಇದೆ.

[2] ಒಂದು ಮಹತ್ವದ ಕೆಲಸ ಮಾಡುವ ಸಮಯದಲ್ಲಿ ಶಕುನಗಳನ್ನು ಗಮನಿಸುವುದು ಬಹಳ ಮುಖ್ಯ. ಶುಭ ಶಕುನಗಳಾಗುತ್ತಿವೆ, ಧೈರ್ಯವಾಗಿ ಹೋಗಿ ಬಾ ಎಂದು ಯಕ್ಷ ಇಲ್ಲಿ ಮೇಘವನ್ನು ಪ್ರೋತ್ಸಾಹಿಸುತ್ತಿದ್ದಾನೆ. ಗಾಳಿ ಮಂದವಾಗಿ ಬೀಸುವುದು, ಚಾದಗೆ, ಬೆಳ್ಳಕ್ಕಿಗಳು ಸಾಲುಗಟ್ಟುವುದು, ಇವೆಲ್ಲ ಶುಭ ಶಕುನಗಳಾಗಿವೆ ಎನ್ನುತ್ತಿದ್ದಾನೆ.

ಮೋಡಣ್ಣನೇ ಮಂದ ಮಂದವಾಗಿ ಬೀಸುತ್ತ ಗಾಳಿಯು ನಿನ್ನನ್ನು ನೂಕಿಸುತ್ತದೆ. ಮಳೆಯ ಆಧಾರದಿಂದಲೇ ಬದುಕುವ ಚಾತಕ ಪಕ್ಷಿಯು ಕೊಕ್ಕನ್ನು ಚಾಚಿ ಕತ್ತನ್ನು ಎಡಕ್ಕೆ ಕೊಂಕಿಸಿ ಮನೋಹರ ಭಾವದಲ್ಲಿ ಚೆಂದವಾಗಿ ಕೂಗುತ್ತದೆ. ಬೆದೆಯ ನೆನೆದು ಬೆಳ್ಳಕ್ಕಿಗಳು ಸಾಲು ಸಾಲುಗೊಂಡು ಬರುತ್ತವೆ. ನೀನು ಅವುಗಳಿಗೆ ಜೀವದಾಸರೆ, ಮಳೆ ತರುವ ತಂದೆ. ಹಾಗಾಗಿ ಅವು 'ಓ ತಂದೆ' ಎಂದುಕೊಂಡು ಧ್ವನಿಗೈದು ನಿನ್ನನ್ನು ಹಾದು ಹೋಗುತ್ತವೆ. ಹಾಗೆ ಸಾಗುವಾಗ ನಿನ್ನ ಬೆನ್ನಿಗೆ ಒಂದು ಅಲೌಕಿಕ ಸೊಬಗನ್ನು ಸೃಷ್ಟಿಸಿ ನೋಡುಗರ ಕಣ್ಣಿಗೆ ಹಬ್ಬವನ್ನು ಉಂಟು ಮಾಡುತ್ತವೆ.

10

**ಎಷ್ಟು ದಿವಸ ಇನ್ನುಳಿದುವೆಂದು ದಿನ ದಿನವು ಲೆಕ್ಕವಾಗಿ**
**ಜೀವ ಹಿಡಿದುಕೊಂಡಿರುವ ನಿನ್ನ ಅತ್ತಿಗೆಯ ನೋಡು ಹೋಗಿ ॥**[1]
**ನಾರಿ ಹೃದಯದಲಿ ನಾರಿನೆಳೆಯವೊಲು ಇಹುದು ಆಸೆಯೊಂದು**
**ಅಗಲಿದಾಗಲೇ ಕಳಚಿ ಬೀಳುವೆದೆ ಹೂವ ಬಿಗಿದುಕೊಂಡು ॥**

ಓ ನಲ್ಮೆಯ ಬಂಧುವೇ, ಇನ್ನು ಎಷ್ಟು ದಿವಸಗಳು ಉಳಿದಿವೆ ಎಂದು ದಿನದಿನವು ಲೆಕ್ಕ ಮಾಡುತ್ತ ಜೀವ ಹಿಡಿದುಕೊಂಡಿರುವ ನಿನ್ನ ಅತ್ತಿಗೆಯನ್ನು ಹೋಗಿ ನೋಡು. ಆ ನಾರಿಯ ಹೃದಯದಲ್ಲಿ ನಾರಿನ ಎಳೆಯ ರೀತಿ ಮತ್ತೆ ಕೂಡುವ ಆಸೆಯೊಂದಿದೆ. ಅದು ನಾನು ಅವಳನ್ನು ಅಗಲಿದಾಗಲೇ ಕಳಚಿ ಬೀಳುವಂತಿದ್ದ ಎದೆಯ ಹೂವನ್ನು ಬಿಗಿಯಾಗಿ ಹಿಡಿದುಕೊಂಡಿದೆ.

11

**ಮೊದಲ ಮೊಳಗಿಗೇ ಬಂಜುಗೆಟ್ಟಿತೋ ಭೂಮಿ ಅಣಬೆ ತಾಳಿ,**[2]
**ಕಿವಿಗೆ ಸವಿಯೆನಿಪ ಮೊಳಗ ಕೇಳಿ ಮಾನಸಕೆ ಬಂತು ದಾಳಿ ॥**[3]

---

[1] ಯಾವುದೋ ಅನ್ಯ ಕೆಲಸವಲ್ಲ, ನಿನ್ನ ಸ್ವಂತ ಜನರ ಕೆಲಸವನ್ನು ನೀನು ಮಾಡುತ್ತಿರುವೆ ಎಂಬ ಭಾವನೆಯನ್ನು ಮೂಡಿಸಲೆಂದು ಯಕ್ಷ ಮೋಡನೊಂದಿಗೆ ತನ್ನ ತಮ್ಮನೆಂಬ ಭಾವದಿಂದ ನುಡಿಯುತ್ತಿದ್ದಾನೆ.

[2] ಅಣಬೆ ಮಳೆಗಾಲದಲ್ಲಿ ಬೆಳೆಯುವ ಸಸಿ. ಅಣಬೆ ಬೆಳೆದಿದೆ ಎಂದರೆ ಅದು ಸಮೃದ್ಧಿಯನ್ನು ಸೂಚಿಸುತ್ತದೆ. ಆ ಕಾಲದಲ್ಲಿ ಭೂಮಿ ಬಂಜರಿಲ್ಲದಾಗಿ ಫಲವತ್ತಾಗುವುದನ್ನು ಬೇಂದ್ರೆಯವರು 'ಬಂಜುಗೆಡು' ಎಂಬ ಕನ್ನಡ ನುಡಿ ಬೆಡಗಿನಲ್ಲಿ ಚಿತ್ರಿಸಿದ್ದಾರೆ.

[3] ಮಾನಸವೆಂದರೆ ಮಾನಸ ಸರೋವರ. ಪುರಾಣಗಳ ಪ್ರಕಾರ ಇದು ಕೈಲಾಸ ಪರ್ವತದಲ್ಲಿದೆ. ವಾಸ್ತವವಾಗಿ ಕೈಲಾಸ ಹಾಗೂ ಹಿಮಾಲಯದ ಮಧ್ಯದಲ್ಲಿದೆ. ಋಗ್ವೇದದಲ್ಲಿ ಇದನ್ನು 'ಬ್ರಹ್ಮಸರಸ್ಸು' ಎಂದು ಕರೆಯಲಾಗಿದೆ. ಬ್ರಹ್ಮ ತನ್ನ ಮನಸ್ಸಿನಿಂದಲೇ ಇದನ್ನು ಸೃಷ್ಟಿಸಿದ್ದರಿಂದ ಇದನ್ನು ಮಾನಸ ಸರೋವರ ಎನ್ನುವರು. ರಾಮಾಯಣದ ಪ್ರಕಾರ ಇದು ಸರಯೂ ನದಿಯ ಮೂಲವಾಗಿದೆ. ಗಂಗೆ ಸ್ವರ್ಗದಿಂದ ಧರೆಗಿಳಿವ ಸಂದರ್ಭದಲ್ಲಿ ಮೇರು ಪರ್ವತವನ್ನು ನಾಲ್ಕು ಬಾರಿ ಸುತ್ತಿದಾಗ ನಾಲ್ಕೂ

**ತುಂಡು ತಾವರೆಯ ಬುತ್ತಿ[1] ಕಟ್ಟಿ ಕೈಲಾಸಕಾಗಿ[2] ಸಾಗಿ**
**ಬಾನ ಬಯಲಿನಲಿ ಕೊನೆಗು ಬರುವವರಸಂಚೆ ಜೋಡಿಯಾಗಿ ॥**

ಯಕ್ಷ ತನ್ನ ಒಳಮನದಿಂದ ಎಚ್ಚೆತ್ತು ಮೋಡ ಹಾಗೂ ಸುತ್ತಣ ಪ್ರಕೃತಿಯನ್ನು ನೋಡಿದನು. ಅದರ ಬೆಡಗಿಗೆ ಮೂಕನಾದನು. ಮೇಘರಾಜನ ಮೊದಲ ಮೊಳಗಿಗೇ ಭೂಮಿಯು ಅಣಬೆಯನ್ನು ಪಡೆದು ಫಲವತ್ತಾಗಿದೆ. ಕಿವಿಗೆ ಸವಿಯೆನಿಸುವ ಅದರ ಮೊಳಗನ್ನು ಕೇಳುತ್ತಿದ್ದ ಹಾಗೆಯೇ ಅದು ಮನಸ್ಸನ್ನು ಮುತ್ತಿ ಆಹ್ಲಾದಗೊಳಿಸಿದೆ. ಆ ಮುದದಲ್ಲಿ ಅವನು ಅದರ ಜೊತೆ ಮಾತಾಡತೊಡಗಿದನು :

ನೀನು ತಾವರೆಯ ಸಮೂಹವನ್ನು ಬುತ್ತಿಯಾಗಿ ಕಟ್ಟಿ ಕೈಲಾಸಕ್ಕೆ ಸಾಗುವ ಗೆಳೆಯ. ನೀನು ಬಾನ ಬಯಲಿನಲ್ಲಿ ನಿನ್ನ ಕೊನೆಯ ಪಯಣದವರೆಗೂ ಹಾರಿ ಬರುವ ಹಂಸಪಕ್ಷಿಗಳ ಜೋಡಿಯಾಗಿ ಸಾಗುತ್ತಿರುವವನು

12

**'ಹೋಗಿ ಬರಲೊ' ಎಂದಪ್ಪಿ ಕೇಳು ಈ ಮುದ್ದು ಗೆಳೆಯನನ್ನು[3]**
**ರಾಮಪಾದಗಳು ಮುದ್ದಿ ಮುದ್ರಿಸಿದವಿದರ ಮಗ್ಗುಲನ್ನು ॥**
**ಕಾಲ ಕಾಲಕೂ ನಿನ್ನ ಕಂಡು ಇದು ಮೈಯನರಳಿಸುವದು**
**ಅಗಲಿ ಬಲು ದಿನಕೆ ಬಂದೆ ಎಂದು ಬಿಸಿ ನೀರನುರುಳಿಸುವದು ॥**

ಈ ಮುದ್ದು ಗೆಳೆಯನನ್ನು ಅಪ್ಪಿಕೊಂಡು "ಹೋಗಿ ಬರಲೋ" ಎಂದು ಕೇಳು. ನಾನಿರುವ ಈ ರಾಮಗಿರಿಯ ಮಗ್ಗುಲನ್ನು ರಾಮಪಾದಗಳು ಮುದ್ದಿನಿಂದ ಮುದ್ರೆಯೊತ್ತಿವೆ. ಇದು ಕಾಲಕಾಲಕ್ಕೆ ನಿನ್ನನ್ನು ಕಂಡು ಮೈಯರಳಿಸುತ್ತದೆ. ಅಗಲಿ ಹೋಗಿದ್ದವನು ಬಹಳ ದಿನಗಳ ನಂತರ ಬಂದನು ಎಂದು.

---

ದಿಕ್ಕುಗಳಲ್ಲಿ ನಾಲ್ಕು ಸರೋವರಗಳನ್ನು ಸೃಷ್ಟಿಯಾದವು. ಮೇರುವಿನ ಪೂರ್ವಕ್ಕೆ ಅರುಣೋದವೂ, ಪಶ್ಚಿಮಕ್ಕೆ ಶೀತೋದವೂ, ಉತ್ತರಕ್ಕೆ ಮಹಾಭದ್ರವೂ ಮತ್ತು ದಕ್ಷಿಣಕ್ಕೆ ಮನಸ ಸರೋವರವೂ ಸೃಷ್ಟಿಯಾದವು. ಪ್ರತಿ ವರ್ಷ ಮಳೆಗಾಲದಲ್ಲಿ ಜಗತ್ತಿನ ಮೂಲೆ ಮೂಲೆಗಳಿಂದ ಜಗತ್ತಿನ ವಿವಿಧ ಜಾತಿಯ ಪಕ್ಷಿಗಳು ಇಲ್ಲಿಗೆ ಬರುತ್ತವೆ.

[1] 'ತುಂಡು ತಾವರೆಯ ಬುತ್ತಿ ಕಟ್ಟಿ' (ಬಿಸಕಿಸಲಯಂ..) ಎಂಬುದು ಸಂಸ್ಕೃತ ಕಾವ್ಯಗಳಲ್ಲಿ ಮತ್ತೆ ಮತ್ತೆ ಬಳಕೆಯಾಗುವ ಒಂದು ಕವಿಸಮಯ

[2] ಕೈಲಾಸ ಶಿವನ ಆವಾಸಸ್ಥಾನ, ಇಲ್ಲಿ ಕುಬೇರನೂ ವಾಸಿಸುವನು. ಪುರಾಣಗಳ ಪ್ರಕಾರ ಹಿಮಾಲಯ ಮತ್ತು ಮೇರು ಪರ್ವತಗಳ ಮಧ್ಯದಲ್ಲಿದೆ.

[3] ರಾಮಗಿರಿ ಅಂದರೆ ಬೆಟ್ಟ, ಇಲ್ಲಿ ಮೇಘದ ಗೆಳೆಯನಾಗಿದೆ. ಮೋಡ–ಪರ್ವತ, ಕಮಲ–ಸೂರ್ಯ, ಸಮುದ್ರ–ಚಂದ್ರ, ನವಿಲು–ಕಾರ್ಮೋಡ ಇವುಗಳ ನಡುವೆ ಸಹಜ ಸ್ನೇಹ ಸಂಬಂಧವಿರುತ್ತದೆ ಎಂಬುದು ಕವಿಸಮಯವಾಗಿದೆ (ಮೇಘಪರ್ವತಯೋರಬ್ಜಸೂರ್ಯಯೋರಬ್ಧಿಚಂದ್ರಯೋಃ । ಶಿಖಿ ಜೀಮೂತಯೋರ್ಮೈತ್ರೀ ವಾತಾಂಗ್ಯೋಶ್ಚ ಸ್ವಭಾವತಃ ॥).

13

**ಹಾದಿ ಹೇಳುವೆನು ಕೇಳು ನಿನಗೆ ಅನುಕೂಲ ಪಯಣಕಾಗಿ[1]**
**ಬಳಿಕ ನಿನ್ನ ಸಂದೇಶ ಕಿವಿಗೆ ಪರಿಣಮಿಸಲಮೃತವಾಗಿ ॥[2]**
**ತೊಳಲಿ ಬಳಲಿ ಗಿರಿ ಶಿಖರಗಳಲಿ ಕಾಲಿಟ್ಟು ಸಾಗುವಾಗ**
**ದಣಿವ ತವಿಸು, ನೀರಿನಿಸೆ ಸವಿಸಿ ಆ ಹಳ್ಳ–ಕೊಳ್ಳದಾಗ ॥**

ನಲ್ಮೆಯ ಗೆಳೆಯನೇ, ನಿನ್ನ ಪ್ರಯಾಣದ ಅನುಕೂಲಕ್ಕಾಗಿ ನೀನು ಸಾಗಬೇಕಾದ ಹಾದಿಯನ್ನು ಹೇಳುತ್ತೇನೆ, ಕೇಳಿಸಿಕೋ. ಅನಂತರ ನಿನ್ನ ಕಿವಿಗೆ ಅಮೃತವಾಗಿ ಪರಿಣಮಿಸುವಂತೆ ನನ್ನ ನಲ್ಲೆಗೆ ತಿಳಿಸಬೇಕಾದ ಸಂದೇಶವನ್ನು ಹೇಳುತ್ತೇನೆ. ನೀನು ಗಿರಿರಶಿಖರಗಳಲ್ಲಿ ಕಾಲಿಟ್ಟು ಸಾಗುವಾಗ ತೊಳಲಿ ಬಳಲುವೆ. ಆಗ ದಣಿವು ತಣಿಸಿಕೊಳ್ಳಲು ಬಾಯಾರಿಕೆ ತಣಿಸಲು ಆ ಹಳ್ಳ ಕೊಳ್ಳಗಳಲ್ಲಿಯ ನೀರನ್ನು ಸ್ವಲ್ಪ ಕುಡಿದು ಸವಿನೋಡು.

14

**ಗಿರಿಯ ಶೃಂಗವೇ ಹರಿದು ಹೋಗುವುದೊ ಏನೊ ಎಂಬುದಾಗಿ[3]**
**ಗಾಳಿ ಬೀಸುತಿರೆ ಸಿದ್ಧ–ಮುಗ್ಧೆಯರು ನೋಡೆ ಚಕಿತರಾಗಿ ॥[4]**
**ಹಾರು ಬಡಗಣಕೆ ನೀರ–ನಿಚುಲನೆಡೆಯಿಂದ[5] ಮೇಲೆ ಅತ್ತ**
**ಹಾದಿಯಲ್ಲಿ ದಿಙ್ನಾಗ[6] ಬೀಸಿದಾ ಕರವ ತಪ್ಪಿಸುತ್ತ ॥**

---

[1] ಮೊದಲ ಪದ್ಯದಲ್ಲಿ ಬರುವ ದಕ್ಷಿಣದ ರಾಮಗಿರಿ ಮತ್ತು ಉತ್ತರದ ಕೈಲಾಸ ಪರ್ವತ ಈ ಎರಡು ಸ್ಥಳಗಳ ಮಧ್ಯದಲ್ಲಿ ಬರುವ ವಿವಿಧ ಸ್ಥಳಗಳ, ನದಿಗಳ, ಸರೋವರಗಳ, ಪುಣ್ಯಕ್ಷೇತ್ರಗಳ, ಭೂಪ್ರದೇಶಗಳ ವರ್ಣನೆ ಈ ಪದ್ಯದಿಂದ ಮೊದಲಾಗುತ್ತದೆ. ಇವುಗಳ ಪೈಕಿ ಪ್ರಸಿದ್ಧ ಸ್ಥಳವೂ ಉಂಟು, ಪ್ರಸಿದ್ಧವಲ್ಲದ ಸ್ಥಳಗಳೂ ಉಂಟು.

[2] ಒಳ್ಳೆಯ ಸುದ್ದಿ ಕಿವಿಗೆ ಅಮೃತ ಸವಿದಂತಾಗುತ್ತದೆ. ಮೇಘನ ಸಂದೇಶ ಯಕ್ಷನಿಗಾಗಿ ಕಾತರಿಸುತ್ತಿದ್ದ ಅವನ ಮಡದಿಯ ಪಾಲಿಗೆ ಕರ್ಣಾಮೃತವಾಗುತ್ತದೆ. ಆದರೆ ಸದ್ಯಕ್ಕೆ ಅವನು ಆ ಹಿತಕರವಾದ ಸಂದೇಶ ವಾಕ್ಯಗಳನ್ನು ರಚಿಸಿ ಮೇಘನಿಗೆ ಹೇಳುವ ಮನಸ್ಥಿತಿಯಲ್ಲಿಲ್ಲ, ಮೇಘನಿಗೆ ಅದರ ಪಯಣದ ಹಾದಿಯನ್ನು ವಿವರಿಸುವ ಉತ್ಸಾಹದಲ್ಲಿದ್ದಾನೆ. ಆದ್ದರಿಂದ ಕವಿ 'ಬಳಿಕ ಹೇಳುವೆನು' ಎಂಬ ಮಾತನ್ನು ಬಳಸಿದ್ದಾರೆ.

[3] ಯಕ್ಷ ತನ್ನ ಸಂದೇಶವನ್ನು ತಲುಪಿಸಲು ಆಯ್ಕೆ ಮಾಡಿಕೊಂಡಿರುವ ಮೋಡ ಅಗಾಧ ಗಾತ್ರದ್ದು ಎಂಬುದು ಈ ಸಾಲಿನಿಂದ ವ್ಯಕ್ತವಾಗುತ್ತದೆ.

[4] ಮೋಡವನ್ನು ಕಂಡು ಮುಗ್ಧರಾದ ತಪಸ್ವಿನಿಯರು ಅಥವಾ ಸಿದ್ಧ ಪುರುಷರ ಮುಗ್ಧರಾದ ಹೆಂಗಸರು ಆಕರ್ಷಿತರಾಗಬಹುದು.

[5] ನಿಚುಲವೆಂಬುದು ನೀರಿನಲ್ಲಿ ಬೆಳೆಯುವ ಒಂದು ಜಾತಿಯ ಹುಲ್ಲಾಗಿದೆ.

[6] ದಿಙ್ನಾಗ: ಎಂಟು ದಿಕ್ಕುಗಳನ್ನು ಕಾಪಾಡುತ್ತಿರುವ ಎಂಟು ಆನೆಗಳು ಅಷ್ಟದಿಗ್ಗಜಗಳು: ಐರಾವತ, ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ, ಸುಪ್ರತೀಕ (ಐರಾವತಃ ಪುಂಡರೀಕೋ ವಾಮನಃ ಕುಮುದೋಽಞ್ಜನಃ । ಪುಷ್ಪದಂತಾಃ ಸಾರ್ವಭೌಮಃ ಸುಪ್ರತೀಕಶ್ಚ ದಿಗ್ಗಜಾಃ ॥ ಅಮರಕೋಶ). ಆನೆಗಳು ದೊಡ್ಡಗಾತ್ರದವಾದ ಕಾರಣ ಅವುಗಳ ಸೊಂಡಿಲುಗಳೂ ದೊಡ್ಡ

ನೀನು ಹೋಗುತ್ತಿರುವಾಗ ಗಿರಿಯ ಶಿಖರವೇ ಹರಿದು ಹೋಗುತ್ತಿದೆಯೋ ಏನೋ ಎಂಬಂತೆ ಗಾಳಿ ಬೀಸುತ್ತಿರುತ್ತದೆ. ಅದನ್ನು ಸಿದ್ಧಮುಗ್ಧೆಯರು ಚಕಿತರಾಗಿ ನೋಡುತ್ತಿರುತ್ತಾರೆ! ಓ ನೀರನೇ ಉತ್ತರ ದಿಕ್ಕಿಗೆ ಹಾರು. ಆ ತೊರೆ ಗಣಗಿಲೆ ಮರದಿಂದ ಮೇಲೆ ಅತ್ತ ಆ ಹಾದಿಯಲ್ಲಿ ದಿಗ್ಗಜ ಬೀಸುವ ಸೊಂಡಿಲಿನಿಂದ ತಪ್ಪಿಸಿಕೊಳ್ಳುತ್ತ ಹೋಗು.

15

**ಏಳು ರತುನಗಳ ಮೇಳ ಕೂಡಿ ಕಂಗೊಳಿಸುವಂತೆ ಮುಂದು**
**ಹುತ್ತದಿಂದ ಎದ್ದಿರುವದಲ್ಲಿ ಅಗೊ ಇಂದ್ರಧನುವದೊಂದು[1] ॥**
**ನಿನ್ನ ಕಪ್ಪು ಮೈಗದರ ಒಪ್ಪ ಬರಲೇನು ಕಾಂತಿ ಬಂತು**
**ಗೋಪವೇಷದಾ ವಿಷ್ಣು ಗರಿಯ ಧರಿಸಿರಲು ಕಾಣುವಂತು ॥**

ಹಾಗೆ ಹೋಗುವಾಗ ಮುಂದೆ, ಹುತ್ತದಿಂದ ಎದ್ದ ಹಾಗೆ ಒಂದು ಕಾಮನ ಬಿಲ್ಲು ಮೂಡಿ ಬಂದಿದೆ. ನಿನ್ನ ಕಪ್ಪು ಮೈಗೆ ಅದು ಓರಣವಾಗಿ ಬರಲು ನಿನಗೆ ವರ್ಣಿಸಲಾಗದ ಕಾಂತಿ ಬಂದಿದೆ. ಗೋಪ ವೇಷದ ಆ ವಿಷ್ಣುವು ಗರಿಯನ್ನು ಧರಿಸಿ ಶೋಭಿಸುವಂತೆ ಕಾಣುತ್ತಿದೆ.

16

**ಕುಡಿದು ಬಿಡುವರೋ ಕಣ್ಣ ಕುಡಿಗಳಲ್ಲಿ ಬೆಳೆಗೆ ಬಂಧು ಎಂದು[2]**

---

ಗಾತ್ರದವಾಗಿರುತ್ತವೆ. ಆದ್ದರಿಂದ ಅದರ ಹೊಡೆತದಿಂದ ತಪ್ಪಿಸಿಕೊಂಡು ಮುಂದುವರಿ ಎಂದು ಎಚ್ಚರಿಕೆ ನೀಡುತ್ತಿದ್ದಾನೆ.

ಇಲ್ಲಿ ಕಾಳಿದಾಸ ಬೌದ್ಧ ದಾರ್ಶನಿಕನಾದ ದಿಙ್ನಾಗನನ್ನು ಪ್ರಸ್ತಾಪಿಸುತ್ತಿದ್ದಾನೆ ಎಂದು ಮಲ್ಲಿನಾಥ ವ್ಯಾಖ್ಯಾನಿಸುತ್ತಾನೆ. ಕಾಳಿದಾಸನ ಕಾಲದಲ್ಲಿ ಬೌದ್ಧ ಹಾಗೂ ಶೈವ ದರ್ಶನಗಳ ಮಧ್ಯೆ ತಾತ್ವಿಕ ಭಿನ್ನಾಭಿಪ್ರಾಯಗಳಿದ್ದವು. ಈ ಪದ್ಯಕ್ಕೆ ಮಲ್ಲಿನಾಥ ನೀಡಿರುವ ವ್ಯಾಖ್ಯಾನ ಹೀಗಿದೆ: ಈ ಸ್ಥಳದಲ್ಲಿ ನಿಚುಲನೆಂಬ ಕವಿ ವಾಸಿಸುತ್ತಿದ್ದಾನೆ. ಅವನು ಉತ್ತಮ(ಶೃಂಗ)ವಾದುದನ್ನು ಪ್ರಶಂಸಿಸುತ್ತಾನೆ. ಅವನ ಸ್ಥಳದಿಂದ ನೀನು ಸ್ವರ್ಗದೆಡೆಗೆ (ಬಡಗಣಕೆ) ಹಾರು. ನಿನ್ನ ಬೌದ್ಧಿಕ ವೇಗವನ್ನು ಕಂಡು ದಿಙ್ನಾಗಾಚಾರ್ಯ ಖಂಡಿಸಬಹುದು ಮತ್ತು ಸಿದ್ಧ ಮುಗ್ಧೆಯರು ಚಕಿತಗೊಳ್ಳಬಹುದು.

ನಿಚುಲನೆಂಬ ಕವಿ ಇದ್ದನೇ ಎಂಬ ಬಗ್ಗೆ ಮಲ್ಲಿನಾಥನನ್ನು ಹೊರತುಪಡಿಸಿದರೆ ಅನ್ಯ ಮೂಲಗಳಲ್ಲಿ ಮಾಹಿತಿ ಲಭ್ಯವಿಲ್ಲ. ಇನ್ನು ದಿಙ್ನಾಗ ಅಸಂಗನೆಂಬ ಬೌದ್ಧಗುರುವಿನ ಶಿಷ್ಯ. 'ಪ್ರಮಾಣ ಸಮುಚ್ಚಯ' ಎಂಬ ಸಂಸ್ಕೃತ ಗ್ರಂಥವನ್ನು ಬರೆದಿದ್ದಾನೆ. ಇದಕ್ಕೆ ಧರ್ಮಕೀರ್ತಿ ವಾರ್ತಿಕೆಯನ್ನು ಬರೆದಿದ್ದಾನೆ. ಪೂರ್ವಮೀಮಾಂಸಕನಾದ ಕುಮಾರಿಲ ಭಟ್ಟ ಈ ಇಬ್ಬರನ್ನೂ ತೀಕ್ಷ್ಣವಾಗಿ ಖಂಡಿಸುತ್ತಾನೆ. ದಿಙ್ನಾಗ 5ನೇ ಅಥವಾ 6ನೇ ಶತಮಾನದವನು ಎಂದು ಅಂದಾಜಿಸಲಾಗಿದೆ. ಕಾಳಿದಾಸನಾದರೂ ಕ್ರಿ.ಪೂ. 1ನೇ ಶತಮಾನದವನಾದ ಕಾರಣ ಅವರಿಬ್ಬರೂ ಸಮಕಾಲೀನರೆನ್ನಲು ಸಾಧ್ಯವಿಲ್ಲ.

[1] ಹುತ್ತದೊಳಗೆ ವಾಸಿಸುವ ನಾಗರ ಹಾವಿನ ಹೆಡೆಯ ಮೇಲಿನ ಮಣಿಯಿಂದ ಏಳು ವರ್ಣಗಳ ಕಾಮನ ಬಿಲ್ಲು ಹುಟ್ಟುತ್ತದೆ ಎಂಬುದು ಪ್ರಾಚೀನ ಕವಿಗಳ ಒಂದು ಕವಿಸಮಯ.

[2] ಇಲ್ಲಿ ಕುಡಿದು ಬಿಡುವರು ಎಂದರೆ ಹಳ್ಳಿಯ ಹೆಂಗಸರು ಹೀರಿಬಿಡುವಂತೆ ನಿನ್ನನ್ನೇ ನೋಡುತ್ತಾರೆ. ಏಕೆಂದರೆ ಗ್ರಾಮೀಣ ಬದುಕಿಗೆ ಮೋಡ ಅದೆಷ್ಟು ಅತ್ಯವಶ್ಯಕ ಎಂದು ಅವರು ಬಲ್ಲರು.

**ಹುಬ್ಬ ಹಾರಿಸುವ ಬಿಂಕವಿಲ್ಲದಾ ಹಳ್ಳಿ ಹೆಂಗಳಂದು ॥**[1]
**ಅದೇ ಹರಗಿ ನೆಲಗಂಪ ಹರಹುವಾ ಹೊಲದ ಮಾಳವೇರಿ**[2]
**ನೀರ ತಳಿಸಿ ಹಗುರಾಗಿ, ಉತ್ತರಕೆ ಮತ್ತೆ ಹೋಗು ಸಾರಿ**

ಅಂದು ಆ ನಯನ ಮನೋಹರ ಪ್ರಶಾಂತ ದೃಶ್ಯವನ್ನು ಬಿಂಕ ಬಿಗುಮಾನವಿಲ್ಲದ ಹಳ್ಳಿ ಹೆಂಗಸರು ನೋಡಿ ನಲಿವರು! ತಮ್ಮ ಬೆಳೆಗೆ ಬಂಧುವಾದವನ ಮನೋಜ್ಞ ನೋಟವನ್ನು ಅವರು ಕಣ್ಣ ಕುಡಿಗಳಲ್ಲಿ ಕುಡಿದುಬಿಡುವರೋ ಎನ್ನುವಂತೆ ದಿಟ್ಟಿಸುವರು. ಓ ಸುಂದರ ಜೀವಪೋಷಕ ಗೆಳೆಯನೇ ಅದೇ ತಾನೆ ಹರಗಿ ನೆಲಗಂಪು ಹರಡುತ್ತಿರುವ ಹೊಲದ ಮಾಳವನು ಏರು. ಹಗುರಾಗಿ ನೀರನ್ನು ತಳಿಸಿ ಆ ಬೆಳೆ ಬಾಳುವಂತೆ ಮಾಡು ಅನಂತರ ಉತ್ತರಕ್ಕೆ ಮುಂದುವರಿದು ಹೋಗು.

17

**ಮಾವು ಮಲೆಯ**[3] **ಕಡು ಕಾಡ ಬೇಗೆ ತವಿಸಿದ್ದೆ ಮಳೆಯ ಸುರಿಸಿ**
**ತಣಿಸದಿರುವದೇ ದಾರಿದಣಿವಿಕೆಯ, ಅದುವು ಕೆಳೆಯ ಸ್ಮರಿಸಿ ॥**
**ಎಂಥ ಕಿರುಕುಳನು ಮೊದಲು ಮಾಡಿದುಪಕಾರ ಮರೆಯಬಹುದೇ**

---

[1] ಓರೆ ನೋಟ, ಹುಬ್ಬು ಹಾರಿಸುವಿಕೆ, ಬಿಂಕ ಬಿನ್ನಾಣ ಮುಂತಾದವು ಅನ್ಯರನ್ನು ತನ್ನತ್ತ ಆಕರ್ಷಿಸಲು ನಗರದ ಹೆಂಗಸರು ಬಳಸುವ ಒಂದು ತಂತ್ರವಾಗಿದೆ. ಹಳ್ಳಿಯ ಹೆಣ್ಣುಮಕ್ಕಳಿಗೆ ಇಂತಹ ತೋರಿಕೆ, ತಂತ್ರಗಳು ಗೊತ್ತಿರುವುದಿಲ್ಲ. ಆದ್ದರಿಂದ ಅವರು ಯಾವುದೇ ಬಿಂಕ ಬಿಗುಮಾನವಿಲ್ಲದೇ ನಿನ್ನನ್ನು ನೇರವಾಗಿ ನೋಡುತ್ತಾರೆ.

[2] ಹಳ್ಳಿಯ ರೈತರು ಆಕಾಶದಲ್ಲಿ ಮೋಡಗಳನ್ನು ಕಂಡೊಡನೆ, ಮಳೆಯ ನೀರನ್ನು ವ್ಯವಸಾಯ ಭೂಮಿ ಹಿಡಿದಿಟ್ಟುಕೊಳ್ಳಲಿ ಎಂಬ ಕಾರಣಕ್ಕೆ ತಮ್ಮ ಹೊಲವನ್ನು ಉಳುಮೆ ಮಾಡುತ್ತಾರೆ. ಹಾಗೆ ಉತ್ತಾಗ ನೆಲದಿಂದ ಮಣ್ಣಿನ ವಾಸನೆ ಮೇಲೇರುತ್ತದೆ, ಹೀಗೆ ಉತ್ತ ನೆಲದ ಮೇಲೆ ನಿನ್ನ ಹನಿಗಳನ್ನು ಉದುರಿಸಿ ಸ್ವಲ್ಪ ಹಗುರಾಗು.

ಕಾಳಿದಾಸ ಬಳಸಿರುವ 'ಮಾಲಂ' ಎಂಬ ಶಬ್ದವನ್ನು ಬೇಂದ್ರೆ ಮಾಳ ಎಂದು ಅನುವಾದಿಸಿದ್ದಾರೆ. ಮಾಳ ಎಂದರೆ ಎತ್ತರದ ಜಾಗ. ಛತ್ತೀಸ್ಗಢದ ರತನ್ಪುರ್ ಹಳ್ಳಿಯ ಸಮೀಪದಲ್ಲಿ ಮಾಲ್ಡಾ ಎಂಬ ಹಳ್ಳಿ ಇದ್ದು, ಇದು ಕಾಳಿದಾಸ ಬಳಸಿರುವ 'ಮಾಲಂ' ಪದದ ಅಪಭ್ರಂಶವಾಗಿದೆ. ಈ ಹಳ್ಳಿಯನ್ನೇ ಇಲ್ಲಿ ಕಾಳಿದಾಸ ಪ್ರಸ್ತಾಪಿಸುತ್ತಿದ್ದಾನೆ ಎಂದು ವಿಲ್ಸನ್ ಎಂಬ ಬ್ರಿಟಿಷ್ ವಿದ್ವಾಂಸ ಅಭಿಪ್ರಾಯ ಪಡುತ್ತಾರೆ. ಆದರೆ ಬೇಂದ್ರೆ ಅದನ್ನು ಒಂದು ಸ್ಥಳನಾಮದ ಅರ್ಥದಲ್ಲಿ ಸ್ವೀಕರಿಸದೇ ಆ ಪದವನ್ನು ಒಂದು ವಿಶೇಷಣವನ್ನಾಗಿ ಅನುವಾದಿಸಿದ್ದಾರೆ.

[3] ವಿಂಧ್ಯಪರ್ವತದಲ್ಲಿ ಅಮರಕಂಟಕವೆಂಬ ಬೆಟ್ಟವಿದೆ. ಆಮ್ರಕೂಟ ಎಂಬ ಪದದ ಅಪಭ್ರಂಶವೇ 'ಅಮರಕಂಟಕ'ವಾಗಿದೆ. ಒಂದಾನೊಂದು ಕಾಲದಲ್ಲಿ ಇಲ್ಲಿ ಮಾವಿನ ಮರಗಳು ಹೆಚ್ಚಾಗಿ ಇದ್ದುದರಿಂದ ಇದಕ್ಕೆ 'ಆಮ್ರಕೂಟ' ಎಂಬ ಹೆಸರು ಬಂದಿದ್ದಿರಬಹುದು. ಈ ಬೆಟ್ಟದಲ್ಲಿ ನರ್ಮದಾ ನದಿ ಹುಟ್ಟಿ ವಿಂಧ್ಯಪರ್ವತದ ಪೂರ್ವಭಾಗದಲ್ಲಿ ಹರಿಯುತ್ತದೆ. ಈ ಆಮ್ರಕೂಟದಲ್ಲಿ ಕಾಳ್ಗಿಚ್ಚು ಹುಟ್ಟಿದಾಗ ಮೋಡ ಮಳೆ ಸುರಿಸಿ ಆ ಕಿಚ್ಚನ್ನು ಆರಿಸುತ್ತದೆ. ತನಗೆ ಹೊತ್ತಿದ್ದ ಬೆಂಕಿಯನ್ನು ಆರಿಸಿದ ಕೃತಜ್ಞತೆ ಆಮ್ರಕೂಟಕ್ಕೆ ಇದ್ದೇ ಇರುತ್ತದೆ. ಇಂತಹ ಆಮ್ರಕೂಟ ಬೆಟ್ಟದ ಮೇಲೆ ಕುಳಿತು ಸ್ವಲ್ಪಕಾಲ ವಿಶ್ರಾಂತಿ ಪಡೆದುಕೋ ಎಂದು ಯಕ್ಷ ಮೋಡಕ್ಕೆ ನಿರ್ದೇಶಿಸುತ್ತಿದ್ದಾನೆ.

**ಎಂದ ಮೇಲೆ ಅವನಂಥ ದೊಡ್ಡವನು[1] ವಿಮುಖನಾಗಲಹುದೇ ॥**

ಪ್ರಿಯ ಸ್ನೇಹಿತನೇ, ಮಾವು ಮಲೆಗೆ ಕಡು ಕಾಡು ಬೇಗೆ ಹೊತ್ತಿಕೊಂಡಾಗ ನೀನು ಮಳೆ ಸುರಿಸಿ ಅದನ್ನು ತವಿಸಿದ್ದೆ. ಆ ಆಮ್ರಕೂಟ ಗಿರಿಯು ಕೆಳೆಯನಾದ ನಿನ್ನ ಉಪಕಾರವನ್ನು ಸ್ಮರಿಸಿ ನಿನ್ನ ದಾಹವನ್ನು ನಿವಾರಿಸಿ ತೃಪ್ತಿ ಪಡಿಸುವುದಿಲ್ಲವೇ? ಎಂಥ ಕ್ಷುದ್ರನಾದರೂ ತನಗೆ ಮೊದಲು ಮಾಡಿದ ಉಪಕಾರವನ್ನು ಮರೆಯಲು ಸಾಧ್ಯವೇ? ಹಾಗೆಂದ ಮೇಲೆ ಅವನಂಥ ದೊಡ್ಡವನು ವಿಮುಖನಾಗಲು ಸಾಧ್ಯವಿಲ್ಲ. ಆ ಮಾವು ಮಲೆಯ ತಂಪಿನಲ್ಲಿ ಸಂತೋಷ ಪಡು.

18

**ತೊಳೆದ ತುರುಬು ಕಪ್ಪಾದ ನೀನು ಗಿರಿಶಿಖರದಲ್ಲಿ ತೇಲೆ[2]**
**ಆಷಾಢ ಮಾವು ಸುರಿದಾವು ಗೊಂಚಲಲಿ ಬೆಟ್ಟದೆದೆಯ ಮೇಲೆ ॥[3]**
**ಅಮರ ಮಿಥುನಗಳ ಪ್ರಣಯ-ದೃಷ್ಟಿ ಅರಳರಳುವಂತೆ ಆಗೆ[4]**
**ಮಲೆಯ ತುದಿಯು ಕಪ್ಪಾಗೆ ತೋರುವದು ನೆಲದ ಮೊಲೆಯ ಹಾಗೆ ॥**

ತೊಳೆದ ತುರುಬಿನ ಕಪ್ಪಾದ ನೀನು ಗಿರಿ ಶಿಖರದಲ್ಲಿ ತೇಲುತ್ತಿದ್ದರೆ ಓ ಆಷಾಢದ ಮಾವು ಗೊಂಚಲು ಗೊಂಚಲಾಗಿ ಬೆಟ್ಟದೆದೆಯ ಮೇಲೆ ಸುರಿಯುತ್ತವೆ. ಮಧುರ ಬಾಂಧವ್ಯದ ಪ್ರೀತಿಯ ಆಟದಲ್ಲಿ ತೊಡಗಿರುವ ಅಮರ ಮಿಥುನಗಳ ಪ್ರಣಯ ದೃಷ್ಟಿ ನಿನ್ನನ್ನು ಕಂಡು ಅರಳುತ್ತದೆ. ಓಹ್, ಇಡೀ ಪ್ರಕೃತಿಯೇ ಆ ಪ್ರಣಯದಾಟದಲ್ಲಿ ಸೊಗವಾಗಿ ಕಾಣುವ ಬಗೆಯನ್ನು ಏನೆಂದು ಹೇಳಲಿ? ಕೇಳು ರಸಿಕ ಗೆಳೆಯನೇ, ಮಲೆಯ ತುದಿಯು ಕಪ್ಪಾಗಲು ಅದು ನೆಲದ ಮೊಲೆಯ ಹಾಗೆ ಕಾಣಿಸುತ್ತದೆ.

19

**ಕಾಡ ಹುಡುಗಿಯರ ಆಟ ನಡೆದ ಎಲೆಮಾಡಗಳಲಿ ತಂಗಿ**
**ನೀರ ಸುರಿಸಿ ತುಸು ಮುಂದುವರಿಸು ಆ ದಾರಿ ದಾಟಿ ಹಿಂಗಿ ॥**

---

[1] ಉಪಕಾರ ಸ್ಮರಣೆ ಮಾಡುವುದರಿಂದ ಬೇಂದ್ರೆ ಇಲ್ಲಿ ಆಮ್ರಕೂಟ ಬೆಟ್ಟವನ್ನು 'ದೊಡ್ಡವನು' ಎಂದು ಸ್ತುತಿಸುತ್ತಿದ್ದಾರೆ. ಅದು ಗಾತ್ರದಲ್ಲೂ ದೊಡ್ಡದು.

[2] ತುರುಬನ್ನು ತೊಳೆದಾಗ ಚೆಲುವು ಇನ್ನೂ ಹೆಚ್ಚುತ್ತದೆ, ಇಮ್ಮಡಿಯಾಗುತ್ತದೆ.

[3] ಆಷಾಢದ ಮೋಡ ಬೆಟ್ಟದ ಮಾವಿನ ಹಣ್ಣುಗಳನ್ನು ಪಕ್ವಗೊಳಿಸುತ್ತದೆ.

[4] ಗಗನಮಾರ್ಗದಲ್ಲಿ ಪ್ರಣಯಚೇಷ್ಟೆಯಲ್ಲಿ ತೊಡಗಿರುವ ದೇವತೆಗಳಿಗೆ ಕೆಳಗೆ ಬೆಟ್ಟ ಮತ್ತು ಅದರ ತುದಿಯಲ್ಲಿರುವ ಕಪ್ಪಾದ ಮೋಡ ನೆಲದ ಮೊಲೆಯಂತೆ ಕಂಡಿತು. ಅದನ್ನು ನೋಡುತ್ತ ಅವರು ಚಕಿತಗೊಂಡರು.

**ವಿಂಧ್ಯದಡಿಗೆ[1] ಕಡುಬಂಡೆಯೊಡೆದು ಹರಿದಿರುವ ರೇವೆ[2] ನೋಡು**
**ಚಿತ್ರ ಚಿತ್ರ ಸಿಂಗಾರವಾದ ಮದ್ದಾನೆ ಹಣೆಗೆ ಜೋಡು ॥[3]**

ಅಲ್ಲಿ ನೋಡು, ಆ ಮಲೆಯಲ್ಲಿ ಸಹಜ ಮುಗ್ಧ ನಿಸರ್ಗ ಬೆಡಗಿನ ಕಾಡು ಹುಡುಗಿಯರ ಆಟ ಎಷ್ಟು ಚೆನ್ನಾಗಿ ನಡೆದಿದೆ. ಆ ಎಲೆ ಮಾಡಗಳಲ್ಲಿ ತಂಗಿ ವಿಶ್ರಾಂತಿ ತೆಗೆದುಕೋ, ಆ ಕಾಡಬೆಡಗಿಯರ ಆನಂದಕ್ಕೆ ಒಯ್ಯಾರ ಒಡಮೂಡುವಂತೆ ನೀರನ್ನು ಸುರಿಸು. ಅವರು ನೆನೆದು ಕುಣಿದು ಸ್ವಚ್ಛಂದ ಸೌಂದರ್ಯದಲ್ಲಿ ಹಿರಿಹಿರಿ ಹಿಗ್ಗಲಿ. ಆ ಆಟ ಮಾಟ ನೋಟ ನಲಿದಾಟ ಸಾಕುಮಾಡಿ ಅದನ್ನು ಬಿಟ್ಟು ಆ ದಾರಿ ದಾಟಿ ಹೋಗು. ಅಗೋ ಮುಂದೆ ವಿಂಧ್ಯ ಪರ್ವತದ ಅಡಿಯಲ್ಲಿ ಕಡುಬಂಡೆಗಳ ಮಧ್ಯೆ ಹರಿದಿರುವ ನರ್ಮದೆ ಎಂದು ಕರೆಯುವ ರೇವಾ ನದಿಯನ್ನು ನೋಡು. ಆ ಬಂಡೆಗಳು ಅಲಂಕೃತಗೊಂಡ ಆನೆಯ ಹಣೆಗಳನ್ನು ಹೋಲುತ್ತವೆ.

20

**ಅಲ್ಲಿ ಕಾಡು ಮದ್ದಾನೆಮಿಂದ ಬಹು ಗಂಧ ನೀರ ಕುಡಿದು[4]**
**ಮುಂದೆ ಹೋಗು ನೇರಿಳೆಯ ತಡೆವಡೆದು ನಿನ್ನ ದಾರಿ ಹಿಡಿದು ॥[5]**

---

[1] ಸಪ್ತಕುಲಪರ್ವತಗಳಲ್ಲಿ ವಿಂಧ್ಯವೂ ಒಂದು (ಮಹೇಂದ್ರೋ ಮಲಯೋ ಸಹ್ಯಃ ಶುಕ್ತಿಮಾನ್ ಋಕ್ಷಪರ್ವತಃ ವಿಂಧ್ಯಶ್ಚ ಪಾರಿಯಾತ್ರಶ್ಚ ಸಪ್ತೈತೇ ಕುಲಪರ್ವತಾಃ ॥). ಮಧ್ಯದೇಶದ ದಕ್ಷಿಣ ದಿಕ್ಕಿನಲ್ಲಿರುವ ವಿಂಧ್ಯವು ಭರತ ವರ್ಷದ ಉತ್ತರ ಮತ್ತು ದಕ್ಷಿಣ ಭಾಗಗಳನ್ನು ವಿಭಜಿಸುತ್ತದೆ. ಪೂರ್ವ ಮತ್ತು ಪಶ್ಚಿಮ ಸಮುದ್ರಗಳನ್ನು ಒಗ್ಗೂಡಿಸುವ ವಿಂಧ್ಯಪರ್ವತವು ಪೂರ್ವದಲ್ಲಿ ಇನ್ನೂ ಮುಂದುವರಿದು ಗಂಗಾನದಿಯವರೆಗೂ ಹರಡಿದೆ. ಉತ್ತರದಲ್ಲಿ ಗಂಗೆ ಮತ್ತು ದಕ್ಷಿಣದಲ್ಲಿ ಗೋದಾವರಿ ಇದರ ವಿಸ್ತಾರದ ಎರಡು ಎಲ್ಲೆಕಟ್ಟುಗಳಾಗಿವೆ. ಮೇರುಪರ್ವತದ ಎತ್ತರವನ್ನು ಕಂಡು ಅಸೂಯೆಗೊಂಡ ವಿಂಧ್ಯವು ತಾನೂ ಅದಕ್ಕಿಂತಲೂ ಎತ್ತರಕ್ಕೆ ಬೆಳೆಯಲಾರಂಭಿಸಿತು. ಇದರ ಬೆಳವಣಿಗೆಯಿಂದಾಗಿ ಸೂರ್ಯನ ಚಲನೆಗೆ ಅಡ್ಡವಾಯಿತು. ಆಗ ಅಗಸ್ತ್ಯ ಋಷಿ ಅದರ ಬೆಳವಣಿಗೆಗೆ ಕಡಿವಾಣ ಹಾಕಿದನೆಂದು ಪುರಾಣಗಳಲ್ಲಿದೆ.

[2] ನರ್ಮದೆಗೆ ರೇವಾ ನದಿ ಎಂಬ ಹೆಸರೂ ಇದೆ. ಸಂಸ್ಕೃತದಲ್ಲಿ 'ರೇವಾ' ಎಂಬ ಪದಕ್ಕೆ ಭೋರ್ಗರೆತ, ಗರ್ಜನೆ ಮುಂತಾದ ಅರ್ಥಗಳಿವೆ. ಈ ಹಿಂದೆ ವಿವರಿಸಿದಂತೆ ರೇವಾನದಿ ವಿಂಧ್ಯದ ಅಮರಕಂಟಕದಲ್ಲಿ ಹುಟ್ಟಿ ಪಶ್ಚಿಮಾಭಿಮುಖವಾಗಿ 800 ಮೈಲಿಗಳವರೆಗೆ ಹರಿದು ಅರಬ್ಬೀ ಸಮುದ್ರ ಸೇರುತ್ತದೆ. ಇದರಲ್ಲಿ ಸ್ನಾನವು ಗಂಗಾಸ್ನಾನದಷ್ಟೇ ಪುಣ್ಯಕರವಾದುದು ಎಂಬುದು ಪ್ರಾಚೀನ ನಂಬಿಕೆ (ಯಥಾ ಗಂಗಾ ತಥಾ ರೇವಾ ತಥಾ ದೇವೀ ಸರಸ್ವತೀ । ಗಂಗಾಸ್ನಾನೇನ ಯತ್ಪುಣ್ಯಂ ತದ್ರೇವಾ ದರ್ಶನೇನ ಚ ॥ ಸಮಂ ಪುಣ್ಯಫಲಂ ಪ್ರೋಕ್ತಂ ಸ್ನಾನ ದರ್ಶನ ಚಿಂತನೈಃ ॥).

[3] ರೇವಾ ನದಿ ಹರಿವ ಹಾದಿಯಲ್ಲಿ ದೊಡ್ಡ ದೊಡ್ಡ ಬಂಡೆಗಳು ಅವಳನ್ನು ತಡೆಯುತ್ತವೆ, ಅದನ್ನು ಕವಿ ಇಲ್ಲಿ ಮದ್ದಾನೆಯ ಹಣೆಗೆ ಹೋಲಿಸಿದ್ದಾನೆ.

[4] ಮಳೆ ಸುರಿಸಿದ ಮೇಲೆ ಮೋಡ ಬರಿದಾಗುತ್ತದೆ, ಹೀಗೆ ಬರಿದಾದ ಮೋಡ ಪುನಃ ನೀರು ತುಂಬಿಸಿಕೊಳ್ಳಬೇಕು

[5] ಹೀಗೆ ನೀರು ತುಂಬಿಸಿಕೊಂಡು ಭರ್ತಿಯಾದ ಮೇಲೆ ಮೋಡಕ್ಕೆ ಸರಾಗವಾಗಿ ಮುಂದೆ ಚಲಿಸಲು ಸಾಧ್ಯವಾಗುವುದಿಲ್ಲ. ನೇರಳೆಯ ತೋಪಿನಲ್ಲಿ ವಿಶ್ರಾಂತಿ ಪಡೆಯುತ್ತದೆ (ದಟ್ಟವಾದ ಹಸಿರು ಮೋಡಗಳನ್ನು

**ತುಂಬು ಮೋಡವೇ, ಗಾಳಿ ಈಡೆ? ನಿನಗಾರು ತೂಗಬಹುದು?**[1]
**ಬರಿದು ಆಗಿ ಹಗುರಾದ; ತುಂಬಿದವ ಮಾನವಂತನಹುದು ॥**[2]

ಆ ನರ್ಮದಾ ನದಿಯ ಕಾಡಿನಲ್ಲಿ ಮದೋದಕವನ್ನು ಸುರಿಸುವ ಗಂಧಗಜಗಳಿವೆ. ಅವು ನದಿಯ ಸವಿನೀರನ್ನು ಕುಡಿದು ಗಂಧಮಯವಾಗಿಸಿದ್ದಾವೆ. ಆ ನೀರನ್ನು ಕುಡಿ. ಹಾಗೆ ಮುಂದೆ ಹೋಗಲು ನೇರಿಳೆಯ ತೋಪು ಇದೆ. ಅಲ್ಲಿ ವಿಶ್ರಾಂತಿ ಪಡೆಯಲು ನಿಂತು ಅನಂತರ ಪಯಣ ಮುಂದುವರಿಸು. ಓ ತುಂಬು ಮೋಡವೇ, ನಿನ್ನ ದಾರಿ ಹಿಡಿದು ಕ್ರಮಿಸುವಾಗ ಗಾಳಿ ನಿನಗೆ ಈಡೇ? ಬರಿದಾಗಿ ಹಗುರಾದವನು ಮಾನವಂತನಾಗುವನು.

21

**ಹಸಿರು ಹಳದಿ ಕಪ್ಪಾದ ಮುಗುಳ ಕಡವಾಲಗಳನು ನೋಡಿ**[3]
**ನೀರ ನೆರೆಯ ಕಲ್ಬಾಳೆ ತಲೆಯನೆತ್ತಿದವು ಹೂವು ಮೂಡಿ ॥**[4]
**ಮೆಯ್ದು ಜಗಿದು ಅಡವಿಯಲಿ, ನೆಲದ ಕಡುಗಂಪ ಮೂಸಿ ಹಿಳಿದು**[5]
**ಸಾರಂಗ ಜಾತಿ ಸುತ್ತಾಡತಾವ ಇಳಿಮಳೆಯ ಹಾದಿ ತುಳಿದು ॥**[6]

---

ಆಕರ್ಷಿಸುವುದರಿಂದ ಅವು ಹಸುರಿನ ಮಧ್ಯೆ ನಿಲ್ಲುವುದು ಪ್ರಕೃತಿಯಲ್ಲಿ ಕಂಡುಬರುವ ಸಂಗತಿಯಾಗಿದೆ. ಈ ನಿಸರ್ಗಸಹಜ ಘಟನೆಯನ್ನು ಕವಿ ಈ ರೀತಿ ವರ್ಣಿಸಿದ್ದಾನೆ).

[1] ಹಗುರವಾದ ಮೋಡಗಳನ್ನು ಗಾಳಿ ಸುಲಭವಾಗಿ ಕೊಂಡೊಯ್ಯುತ್ತದೆ. ಆದರೆ ಹೀಗೆ ನೀರನ್ನು ತನ್ನೊಳಗೆ ಭರ್ತಿಯಾಗಿಸಿಕೊಂಡ ಮೋಡ ಗಾಳಿಗೆ ಸುಲಭವಾಗಿ ಚೆದುರಿ ಹೋಗಲಾರದು, ಗಾಳಿಯೊಂದಿಗೆ ಗಾಳಿಯ ವೇಗದಲ್ಲಿ ಮುಂದಕ್ಕೆ ಸಾಗದು.

[2] ಮನುಷ್ಯ ಅಂತರಂಗದಲ್ಲಿ ಖಾಲಿಯಾಗಬೇಕು, ಹಾಗೆಯೇ ಭರ್ತಿಯಾಗಲೂ ಬೇಕು. ಒಳಗೆ ಭರ್ತಿಯಾದವನನ್ನು, ಪೂರ್ತಿಯಾದವನನ್ನು ಲೋಕ ಗೌರವಿಸುತ್ತದೆ. ನೀರಿನಿಂದ ತುಂಬಿದ ಭಾರವಾದ ಮೋಡವನ್ನೂ ಲೋಕದ ಜನ ಹೀಗೆಯೇ ಗೌರವಿಸುತ್ತಾರೆ.

[3] ಕದಂಬ ವೃಕ್ಷವನ್ನು ಇಲ್ಲಿ ಕಡವಾಲ ಎಂದು ಅನುವಾದಿಸಲಾಗಿದೆ. ಮೋಡದ ಆಗಮನವನ್ನು ಕಂಡು ಕಡವಾಲ ವೃಕ್ಷದಲ್ಲಿ ಹಸಿರು ಹಳದಿ ಕಪ್ಪು ಮುಂತಾದ ಹಲವು ಬಣ್ಣಗಳ ಹೂವುಗಳು ಅರಳುತ್ತವೆ (ಮೊಗ್ಗಿನ ಹಂತದಿಂದ ಪೂರ್ತಿಯಾಗಿ ಅರಳಿದ ಹಂತದವರೆಗೆ ಆ ಹೂವು ವಿವಿಧ ಬಣ್ಣಗಳಿಗೆ ತಿರುಗುತ್ತವೆ). ಮಳೆಗಾಲದಲ್ಲಿ ಅರಳುವ ಈ ಹೂವುಗಳು ಮಳೆಯ ಮೊದಲ ಹನಿಗಳಿಂದ ತೋಯುತ್ತವೆ.

[4] ಮೋಡದ ಆಗಮನವನ್ನು ಕಂಡು ಕಲ್ಬಾಳೆ ಹೂವನ್ನು ಅರಳಿಸುತ್ತವೆ.

[5] ಮೋಡ–ಮಳೆಯ ಆಗಮನದಿಂದ ನೆಲದಿಂದ ಕಂಪು ಹೊಮ್ಮುತ್ತದೆ, ಆ ವಾಸನೆಯನ್ನು ಹೀರಿ ಜಿಂಕೆಗಳು ಮಳೆ ಯಾವೆಲ್ಲ ಹಾದಿಗಳಲ್ಲಿ ಸಾಗುತ್ತದೋ ಆ ಹಾದಿಗಳಲ್ಲಿ ಓಡಾಡುತ್ತವೆ. ಪ್ರಕೃತಿಯ ಈ ಎಲ್ಲ ಘಟನೆಗಳು ಮೋಡದ ಆಗಮನವನ್ನು ಸೂಚಿಸುತ್ತವೆ.

[6] ಮೂಲ ಸಂಸ್ಕೃತ ಕಾವ್ಯದಲ್ಲಿ ಈ ಪದ್ಯವಾದ ನಂತರ ಈ ಕೆಳಗಿನ ಪದ್ಯವಿದೆ. ಆದರೆ ಈ ಪದ್ಯವನ್ನು ಬೇಂದ್ರೆ ಅನುವಾದಿಸಿಲ್ಲ:

ಅಂಭೋಬಿಂದು ಗ್ರಹಣ ಚತುರಾಂಶ್ಚಾತಕಾನ್ವೀಕ್ಷಮಾಣಾಃ

ಶ್ರೇಣೀಭೂತಾಃ ಪರಿಗಣನಯಾ ನಿರ್ದಿಶಂತೋ ಬಲಾಕಾಃ ॥

ಓ ಮಿತ್ರ ಆ ಅರಣ್ಯದ ಸಹಜ ಆನಂದದ ಕಂಪು ಸೊಂಪನ್ನು ಸವಿ. ಅಲ್ಲಿಯ ಹಸಿರು, ಹಳದಿ ಕಪ್ಪಾದ ಕಾಡಿನಲ್ಲಿ ಅರೆಬಿರಿದ ಕೇಸರಿ ಬಣ್ಣದ ಸುವಾಸನೆಯ ಹೂವು ಬಿಡುವ ಕದಂಬ ವೃಕ್ಷಗಳನ್ನು ನೋಡು. ನೀರಿನ ನೆಲೆಯಲ್ಲಿ ಕಲ್ಬಾಳೆ ಹೂವು ಮುಡಿಸಿಕೊಂಡು ತಲೆಯನೆತ್ತಿ ಕಂಗೊಳಿಸುವುದನ್ನು ನೋಡು. ನೇಹಿಗನೇ, ಈ ಇಳೆ ಮಳೆಯ ಹಾದಿ ತುಳಿದು ನೆಲದ ಕಡುಗಂಪನ್ನು ಮೂಸಿ ಹಿಂಡಿದಂತೆ ಹುಲ್ಲು ಸಸ್ಯಗಳನ್ನು ಆಸ್ವಾದಿಸುತ್ತಿರುವ ಸಾರಂಗಗಳನ್ನು ನೋಡು. ಮೈಮೇಲೆ ಚಿಕ್ಕೆಗಳಿರುವ ಆ ಜಿಂಕೆ ಹುಲ್ಲೆಗಳು ಮೇಯ್ದು ಜಗಿಯುತ್ತ ಕಣ್ಣರಳಿಸಿ ಸುತ್ತಾಡುವ ಸೊಬಗೇ ಸೊಬಗು.

22

**ಎಷ್ಟು ಬೇಗ ನೀ ಹೋಗಬೇಕು ನನಗಾಗಿ ಎನಿಸಿ ಏನು?**
**ಬೆಟ್ಟ ಬೆಟ್ಟ ಬಿಟ್ಟಿರುವ ಮಲ್ಲಿಗೆಯ ಜೊತೆಗೆ ಉಳಿವೆ ನೀನು ॥**
**ಇಷ್ಟು ತಿಳಿಯೆನೇ? ಕಣ್ಣು – ತುಂಬಿ ಕುಡಿಗಣ್ಣ ಚಾಚಿ ಕೇಕಿ[1]**
**ಕೇಕೆ ಹಾಕುತಲೆ ಹೇಗೊ ಹೊರಡುವೀ ಹಿಂದುಮೆಟ್ಟ ನೂಕಿ ॥**

ಗೆಳೆಯನೇ ನನಗಾಗಿ ಎಷ್ಟು ಬೇಗ ಹೋಗಬೇಕು ಎನಿಸಿರಬೇಕು. ನೀನು ಬೆಟ್ಟ ಬೆಟ್ಟದಲ್ಲಿ ಬಿಟ್ಟಿರುವ ಮಲ್ಲಿಗೆಯ ಜೊತೆಗೆ ಉಳಿಯಬಹುದು. ನವಿಲು ಕಣ್ತುಂಬಿ ನಲಿದು ನರ್ತಿಸಿ ಕುಡಿಗಣ್ಣು ಚಾಚಿ ಕೇಕೆ ಹಾಕುತ್ತವೆ. ಆದರೆ ನೀನು ಅವುಗಳನ್ನು ಹಿಂದಿಕ್ಕಿ ಮುಂದಕ್ಕೆ ಸಾಗುವೆ.

23

**ಮುಳ್ಳು ಮೊನೆಯ ಕೇದಿಗೆಯ ಹಳದಿ ನೆರಳುಳ್ಳ ತೋಟವಳ್ಳಿ[2]**

---

ತ್ವಾಮಾಸಾದ್ಯ ಸ್ತನಿತ ಸಮಯೇ ಮಾನಯಿಷ್ಯಂತಿ ಸಿದ್ಧಾಃ
ಸೋತ್ಕಂಪಾನಿ ಪ್ರಿಯಸಹಚರೀ ಸಂಭ್ರಮಾಲಂಗಿತಾನಿ ॥

(ಆಕಾಶದಿಂದ ಬೀಳುವ ಮಳೆಹನಿಗಳನ್ನು ಹೀರುವಲ್ಲಿ ಕುಶಲವಾಗಿರುವ ಚಾತಕ ಪಕ್ಷಿಗಳನ್ನು ಕಂಡು, ಸಾಲುಗಟ್ಟಿ ಹಾರುತ್ತ ನೀನು ಸಾಗುವ ದಿಕ್ಕನ್ನು ನಿರ್ದೇಶಿಸುವ ಬಲಾಕ ಪಕ್ಷಿಗಳನ್ನು ಕಂಡು ಸಿದ್ಧ ಪುರುಷರು ಸಂಭ್ರಮದಿಂದ ತಮ್ಮ ಹೆಣ್ಣುಗಳನ್ನು ಆಲಂಗಿಸಿಕೊಳ್ಳುತ್ತಾರೆ. ಅಂತಹ ಸಿದ್ಧಪುರುಷರು ನಿನ್ನನ್ನು ಆದರದಿಂದ ಸ್ವಾಗತಿಸುತ್ತಾರೆ).

ಯೋಗಿಗಳು ಸಿದ್ಧಪುರುಷರು ಮೇಘವನ್ನು ಕಂಡು ಕಾಮಾತುರರಾಗುತ್ತಾರೆ ಎಂಬುದು ಅನುಚಿತವಾದ ಮಾತುಗಳಾಗಿವೆ. ಇಂತಹ ಪದ್ಯವನ್ನು ಕಾಳಿದಾಸ ಬರೆದಿರಲಾರ, ಇದೊಂದು ಪ್ರಕ್ಷೇಪ ಇರಬಹುದೆಂದು ವಿದ್ವಾಂಸರು ಭಾವಿಸುತ್ತಾರೆ. ಬೇಂದ್ರೆ ಸಹ ಈ ಕಾರಣಕ್ಕೆ ಈ ಪದ್ಯವನ್ನು ಅನುವಾದಿಸದೇ ಕೈಬಿಟ್ಟಿದ್ದಾರೆ.

[1] ಮಳೆಗಾಲ ನವಿಲುಗಳು ಸಮಾಗಮವಾಗುವ, ಸಂತಾನೋತ್ಪತ್ತಿ ಕಾಲಮಾನವಾಗಿದೆ. ಮೋಡದ ಆಗಮನದಿಂದ ಅವು ಗರಿಗೆದರಿ ಕುಣಿಯುತ್ತವೆ, ಕೇಕೆ ಹಾಕುವ ಮೂಲಕ ನಿನ್ನನ್ನು ಸ್ವಾಗತಿಸುತ್ತವೆ. ಅದನ್ನು ನೋಡುತ್ತ ವಿಳಂಬಿಸದೇ ಬೇಗನೆ ಹೊರಡುವೆ ಎಂಬ ಭರವಸೆಯನ್ನು ಯಕ್ಷ ವ್ಯಕ್ತಪಡಿಸುತ್ತಿದ್ದಾನೆ.

[2] ದಶಾರ್ಣ ನಗರದ ಲಕ್ಷಣಗಳನ್ನು ಇಲ್ಲಿ ಕವಿ ವಿವರಿಸುತ್ತಿದ್ದಾನೆ. ಅಲ್ಲಿ ಕೇದಿಗೆ ಹೂವುಗಳ ಹೇರಳವಾಗಿ ಅರಳಿರುತ್ತವೆ.

**ಊರ ತಿರಿವ ಕಾಕಗಳ[1] ಬಸದಿಗಳ[2] ಹಾದಿಗಿಡದ ಹಳ್ಳಿ ॥**
**ಮಳೆಯ ಮಾಸದಲಿ ಜಂಬು ನೇರಿಳೆಯೆ ತುಂಬಿ ಬನಗಳಲ್ಲಿ**
**ಕೆಲವೆ ದಿವಸ ಆ ಹಂಸಗಳಿಗೆ ನೆಲೆ ಆ ದಶಾರ್ಣದಲ್ಲಿ ॥[3]**

ಓ ಮೇಘವೇ ಮುಂದೆ ನಿನಗೆ ಸಿಗುವ ದೇಶ ದಶಾರ್ಣ. ಅದು ತೋಟ ಹಳ್ಳಿಗಳ ನಾಡು. ಆ ತೋಟಗಳಲ್ಲಿ ಮುಳ್ಳು ಮೊನೆಯ ಕೇದಿಗೆಯ ಗಿಡದ ಕಂಪು ನೆರಳಿದೆ. ಹಾದಿ ಹಾದಿಯೂ ತೊನೆದಾಡುವ ಗಿಡಮರಗಳಿಂದ ಸೊಂಪಾಗಿದೆ. ಆ ಮಾರ್ಗದ ಹಾಳು ಬಸದಿಗಳಲ್ಲಿ ಊರು ತಿರಿವ ಕಾಕಗಳಿರುತ್ತವೆ. ಮಳೆಗಾಲದಲ್ಲಿ ಆ ಬನಗಳಲ್ಲಿ ಜಂಬು ನೇರಳೆ ತುಂಬಿರುತ್ತದೆ. ಆ ದಶಾರ್ಣವು ಕೆಲವು ದಿವಸ ಹಂಸಗಳಿಗೆ ನೆಲೆಯಾಗಿರುತ್ತದೆ.

24

**ದಿಕ್ಕು ದಿಕ್ಕಿನಲಿ ವಿದಿಶೆಯೆಂದು ಹೆಸರಾದ ರಾಜಧಾನಿ[4]**
**ಅಲ್ಲಿ ಹೋಗಿ ಬಯಬಯಸಿದಂಥ ಹಣ್ತಿನ್ನು ಕಾಮುಕಾ ನೀ ॥**
**ಹುಬ್ಬು ಮುರಿವ ಬೆಡಗುಳ್ಳ ಮುಖಕೆ ಸರಿ ವೇತ್ರವತಿಯ ನೀರು[5]**
**ಅವಳ ಬಳಿಗೆ ಗುಡುಗುಡಿಸಿ ಸೊಬಗ, ನೀನವಳ ಸವಿಯ ಹೀರು ॥[6]**

---

[1] ಮೂಲದಲ್ಲಿರುವ 'ಗೃಹಬಲಿ' ಎಂಬ ಪದವನ್ನು ಬೇಂದ್ರೆ 'ಕಾಕ' ಎಂದು ಅನುವಾದಿಸಿದ್ದಾರೆ. ಮನುಷ್ಯರು ವಾಸಿಸುವ ಜಾಗದಲ್ಲಿ ವಾಸಿಸುವ ಯಾವುದೇ ಹಕ್ಕಿ (ಗುಬ್ಬಚ್ಚಿ, ಪಾರಿವಾಳ, ಕಾಗೆ, ಪಿಕಳಾರ ಇತ್ಯಾದಿ) 'ಗೃಹಬಲಿ'ಯಾಗಬಹುದು.

[2] ಮೂಲದಲ್ಲಿರುವ 'ಚೈತ್ಯ' ಎಂಬ ಪದವನ್ನು ಬೇಂದ್ರೆ 'ಬಸದಿ' ಎಂದು ಅನುವಾದಿಸಿದ್ದಾರೆ. ಸಂಸ್ಕೃತದಲ್ಲಿ ಚೈತ್ಯ ಎಂಬ ಪದಕ್ಕೆ ಧಾರ್ಮಿಕ ಮಂದಿರ ಎಂಬ ಅರ್ಥವಿರುವುದರ ಜೊತೆಗೆ ಪವಿತ್ರವಾದ ವೃಕ್ಷ ಎಂಬ ಅರ್ಥವೂ ಇದೆ. ಚಿತಾ ಎಂಬ ಪದದಿಂದ ಚೈತ್ಯ ಎಂಬ ಪದ ಹುಟ್ಟಿದ್ದು ಇದಕ್ಕೆ ಸ್ಮಶಾನವೆಂಬ ಅರ್ಥವೂ ಇದೆ. ಆಲದ ಮರವನ್ನು ಅಥವಾ ರಸ್ತೆಯ ಪಕ್ಕದ ಯಾವುದೇ ಮರವನ್ನು ಚೈತ್ಯ ಎನ್ನುವುದುಂಟು. ಸಾಧು ಸಂತರುಗಳು ಸತ್ತಾಗ ಅವರ ಶವವನ್ನು ನದೀತೀರದಲ್ಲೋ ಅಥವಾ ಜನರಿಗೆ ಅನುಕೂಲವಾಗುವ ಸ್ಥಳದಲ್ಲೋ ಸಮಾಧಿ ಮಾಡಿ ಅದರ ಸಮೀಪದಲ್ಲಿ ಒಂದು ಆಲದ ಮರವನ್ನು ನೆಡುವುದುಂಟು. ಇಂತಹ ಆಲದ ಮರವನ್ನೂ ಚೈತ್ಯವೆನ್ನುವರು.

[3] ದಶಾರ್ಣ ಎಂಬ ಪದಕ್ಕೆ ಭದ್ರವಾದ ಕೋಟೆ ಎಂಬರ್ಥವಿದೆ. ಇದೊಂದು ನದಿಯ ಹೆಸರೂ ಹೌದು. ವಿಂಧ್ಯಪರ್ವತದಲ್ಲಿ ಹುಟ್ಟುವ ಹಲವು ನದಿಗಳ ಪೈಕಿ ದಶಾರ್ಣ ನದಿಯೂ ಒಂದು. ಇಂದು ಛತ್ತೀಸ್‌ಗಢದಲ್ಲಿ ಈ ನದಿ ಹರಿಯುತ್ತದೆ.

[4] ವಿದಿಶಾ ಮಾಳ್ವ ಪ್ರಾಂತ್ಯದಲ್ಲಿರುವ ಒಂದು ಪಟ್ಟಣ. ಅಂದಿನ ಕಾಲಕ್ಕೆ ಅದು ಮಾಳ್ವದ ರಾಜಧಾನಿಯಾಗಿತ್ತು. ಇದು ತಂಬಾಕು ಬೆಳೆಗೆ ಪ್ರಸಿದ್ಧವಾದುದು. ಇಂದು ವಿದಿಶಾದ ಅಪಭ್ರಂಶ ರೂಪ 'ಭಿಲ್ಸಾ' ಎಂಬ ಪದ ಬಳಕೆಯಲ್ಲಿದೆ.

[5] ವೇತ್ರವತೀ ನದಿ: ಇಂದು ಈ ನದಿಗೆ ಬೇತ್ವಾ ಎಂಬ ಹೆಸರಿದೆ. ವಿಂಧ್ಯದ ಉತ್ತರ ಭಾಗದಲ್ಲಿ ಜನಿಸುವ ಈ ನದಿಯು ಈಶಾನ್ಯ ದಿಕ್ಕಿನಲ್ಲಿ ಮಾಳ್ವ ಪ್ರಾಂತ್ಯವನ್ನು ದಾಟಿ, 340 ಮೈಲಿ ದೂರದವರೆಗೆ ಹರಿದು ಅಲಹಾಬಾದ್‌ನಲ್ಲಿ ಯಮುನೆಯನ್ನು ಸೇರುತ್ತದೆ.

[6] ಕಾಳಿದಾಸನ ಮೂಲ ಪದ್ಯಕ್ಕೆ "ನಿನ್ನ ಗುಡುಗಿನ ಗರ್ಜನೆಯನ್ನು ಕೇಳಿ ವೇತ್ರವತಿಯು ಸಿಡಿಮಿಡಿಗೊಂಡು ಹುಬ್ಬು ಕೊಂಕಿಸುತ್ತಾಳೆ. ಆಗ ನೀನು ಅವಳ ಸವಿಯನ್ನು ಹೀರು" ಎಂಬ ಅರ್ಥವಿದೆ.

ಅದರ ರಾಜಧಾನಿ ವಿದಿಶೆಯು ದಿಕ್ಕು ದಿಕ್ಕಿನಲ್ಲಿ ಹೆಸರುವಾಸಿಯಾಗಿದೆ. ಹೇ ಕಾಮುಕನೇ, ಅಲ್ಲಿ ಹೋಗಿ ಬಯಸಿದಂಥ ಹಣ್ಣನ್ನು ತಿನ್ನು. ನಿನ್ನ ಹುಬ್ಬು ಕುಣಿಸುವ ಬೆಡಗಿನಿಂದ ಕೂಡಿರುವ ಮುಖಕ್ಕೆ ಸರಿಯಾದುದು ವೇತ್ರವತಿಯ ನೀರು. ಓ ಸೊಬಗ ಅವಳ ಬಳಿ ಗುಡುಗುಡಿಸಿ ಅವಳ ಸವಿಯ ಹೀರು.

25

**ನೀನು ಮುಟ್ಟೆ ಮೈ ಜುಮ್ಮು ತಟ್ಟಿತೋ ಅಗಲಹೂವ ತೆರೆದು**
**ನೀಚಗಿರಿಯ[1] ಕಡವಾಲ ಇಹವು ಹೋಗಲ್ಲಿ ಸಂದು ಮರೆದು ॥**
**ಅಲ್ಲಿ ನಲ್ಲ-ಬೆಲೆವೆಣ್ಣ-ಕೂಟ ಹೊಸಗಂಪನುಗುಳುತಿಹವು**
**ನಾಗರಿಕರ ತಾರುಣ್ಯ ಮದದ ಕಲ್ಮಾಡ ಹೊಗಳುತಿಹವು ॥**

ಅಲ್ಲಿ ಕೀಳಾದ ಬಯಕೆಯ ಪೂರೈಕೆಗಾಗಿ ನೀಚ ಗಿರಿಗಳಿರುವವು. ಅಲ್ಲಿ ಕದಂಬ ವೃಕ್ಷಗಳಿವೆ. ನೀನು ಮುಟ್ಟಿದೊಡನೆ ಅವುಗಳಿಗೆ ರೋಮಾಂಚನವಾಗಿ ಹಿಗ್ಗಿ ಅರಳಿ ಅಗಲ ಹೂವಾಗುವವು. ಹೇ ರಸಿಕ ಮೇಘವೇ, ನೀನು ನಿನ್ನ ಮನಸ್ಸಿನ ಖಿನ್ನತೆ ಮರೆಯಲು ಅಲ್ಲಿಗೆ ಹೋಗು. ಅಲ್ಲಿ ನಲ್ಲರ ಬೆಲೆವೆಣ್ಣುಗಳ ಕೂಟವು ಹೊಸ ಕಂಪನ್ನು ಬೀರುತ್ತಿವೆ. ಅಲ್ಲಿ ಕಲ್ಲಿನಿಂದ ಕಟ್ಟಿದ ಉಪ್ಪರಿಗೆ ಕಲ್ಮಾಡಗಳು ನಾಗರಿಕರ ಮದ ನಿನ್ನನ್ನು ಹೊಗಳುತ್ತಿವೆ.

26

**ಅಲ್ಲಿ ತಂಗಿ ಮುಂಬರಿಯೊ ಕಾಡ-ಹೊಳೆ-ದಂಡೆ-ತೋಟದಲ್ಲಿ[2]**
**ಬಳ್ಳಿ ಬಳ್ಳಿ ಹೂಜಲ್ಲಿಯಲ್ಲಿ[3] ಮುಂಬನಿಯ ತುಳುಕಿ ಚೆಲ್ಲಿ ॥**
**ಗಲ್ಲ ಬೆಮರೆ, ಕಿವಿಕಮಲ ಕಮರೆ,[4] ಪಾಮರರ ಅಮರಿಯರಿಗೆ**
**ನಿನ್ನ ನೆರಳ ಕ್ಷಣವಿತ್ತು, ರಮಿಸು ಹೂದೋಟಗಿತ್ತಿಯರಿಗೆ ॥**

ಅಲ್ಲಿ ಸ್ವಲ್ಪ ತಂಗು. ಅನಂತರ ಕಾಡು, ಹೊಳೆ, ಅದರ ದಡದ ತೋಟದಲ್ಲಿ ಮುಂದುವರಿ.

---

[1] ನೀಚಗಿರಿ ಎಂದರೆ ಅಷ್ಟು ಎತ್ತರವಿಲ್ಲದ ಬೆಟ್ಟಗಳ ಸಾಲು. ವಿದಿಶಾ ನಗರದ ಆಸುಪಾಸಿನ ಗಿರಿಪರ್ವತಗಳು ಕಡಿಮೆ ಎತ್ತರದಲ್ಲಿವೆ. ನೀಚಗಿರಿಯ ಮೇಲೆ ಉದ್ದನಾಗಿ ಬೆಳೆದಿರುವ ಕದಂಬ ವೃಕ್ಷಗಳ ಸಮೂಹವನ್ನು ನೋಡಿದರೆ ಮೋಡದ ಸ್ಪರ್ಶವಾದೊಡನೆ ನೀಚಗಿರಿಯೇ ರೋಮಾಂಚನಗೊಂಡಿತೇನೋ ಎಂಬಂತೆ ಭಾಸವಾಗುತ್ತದೆ. ಆದರೆ ಮೋಡದ ಆಗಮನಕ್ಕೆ ಮುನ್ನವೂ ಕದಂಬ ವೃಕ್ಷಗಳು ನಿಂತೇ ಇದ್ದವಲ್ಲ, ಅವು ಹೊರಟ ಮೇಲೆಯೂ ನಿಂತೇ ಇರುತ್ತವಲ್ಲ! ಎಂಬ ಪ್ರಶ್ನೆ ಏಳುತ್ತದೆ. ಮಳೆಯ ಮೊದಲ ಹನಿ ಬೀಳುತ್ತಲೇ ಕದಂಬ ವೃಕ್ಷಗಳ ಹೂವುಗಳು ಅರಳಿ ಅಗಲವಾಗಿಬಿಡುತ್ತವೆ, ಇದುವೇ ಆ ರೋಮಾಂಚನದ ಅರ್ಥ ಎಂದು ಮಲ್ಲಿನಾಥನೇ ಮುಂತಾದ ಕಾಳಿದಾಸನ ವ್ಯಾಖ್ಯಾನಕಾರರು ಸಮಾಧಾನ ಹೇಳುತ್ತಾರೆ.

[2] ಕವಿ ಇಲ್ಲಿ 'ಕಾಡ ಹೊಳೆ' ಎಂದಷ್ಟೇ ಹೇಳಿದ್ದಾರೆ ಹೊಳೆಯ ಹೆಸರನ್ನು ತಿಳಿಸಿಲ್ಲ. ಕಾಳಿದಾಸನೂ 'ವನನದಿ' ಎಂದು ಪ್ರಯೋಗಿಸಿದ್ದಾನೆ. ವೇತ್ರವತಿಯಿಂದ ಸಿಪ್ರಾನದಿಯವರೆಗೆ ಚಂಬಲ್ ಕಣಿವೆಯಲ್ಲಿ ಅಸಂಖ್ಯ ಝರಿಗಳು ಹರಿಯುತ್ತವೆ.

[3] ಕಾಳಿದಾಸನ ಯೂಥಿಕಾ ಎಂಬ ಪದವನ್ನು ಬೇಂದ್ರೆ 'ಹೂಜಲ್ಲಿ' ಎಂದು ಅನುವಾದಿಸಿದ್ದಾರೆ. ಇದು ಒಂದು ಬಗೆಯ ಕಾಡುಮಲ್ಲಿಗೆ ಜಾತಿಯ ಹೂವು.

[4] ಸ್ಥಳೀಯ ಹೆಣ್ಣು ಮಕ್ಕಳು ಕಮಲವನ್ನು ಇಷ್ಟಪಟ್ಟು ಕಿವಿಯಲ್ಲಿ ಧರಿಸುತ್ತಾರೆ. ಕೆಲವು ವ್ಯಾಖ್ಯಾನಕಾರರು ಹಳ್ಳಿಯ ಹೆಣ್ಣು ಮಕ್ಕಳ (ಪಾಮರಿಯರ) ಕಿವಿಯನ್ನು ಕವಿ ಕಮಲಕ್ಕೆ ಹೋಲಿಸಿದ್ದಾನೆ ಎಂದು ತಪ್ಪಾಗಿ ವ್ಯಾಖ್ಯಾನಿಸಿದ್ದಾರೆ.

ಬಳ್ಳಿ ಹೂಗೊಂಚಲುಗಳಲ್ಲಿ ಮುಂಬನಿಯ ತುಳುಕಿ ಚೆಲ್ಲು. ಆ ಹೂದೋಟಗಿತ್ತಿಯರು ಏನೂ ತಿಳಿಯದ ಮುಗ್ಧ ಪಾಮರ ಅಪ್ಸರೆಯರು. ಅವರು ಬಿಸಿಲಲ್ಲಿ ದುಡಿಯುವಾಗ ಗಲ್ಲ ಬೆವರಿ, ಕಿವಿಯಲ್ಲಿ ಧರಿಸಿದ ಕಮಲಪುಷ್ಪ ಬಾಡುವಾಗ ನಿನ್ನ ನೆರಳನ್ನು ಕ್ಷಣಕಾಲ ಅವರಿಗೆ ನೀಡಿ ರಮಿಸು!

27

**ಉತ್ತರಕ್ಕೆ ಹೊರಟವಗೆ ಉಜ್ಜಯಿನಿ[1] ಅಡ್ಡವಾದರೇನು?**
**ಅಲ್ಲಿ ಮೇಲು ಮಾಳಿಗೆಯ ಭೋಗ ಕಳಕೊಳ್ಳಬೇಡ ನೀನು ॥**
**ಆऽ ಊರ ಹೆಂಗಸರ ಕಣ್ಣ ಬಳಿ ಮಿಂಚೆ ಮಿಣುಕು ಎನ್ನು**
**ಅವರ ಕಣ್ಣ–ಕುಡಿ–ಲಲ್ಲೆಯೊಲ್ಲೆಯಾ? ವ್ಯರ್ಥ ಇದ್ದು ಕಣ್ಣು ॥**

ಹೇ ಗೆಳೆಯನೇ, ಉತ್ತರಕ್ಕೆ ಹೊರಟಿರುವ ನಿನಗೆ ಈ ಮಾತನ್ನು ಹೇಳುತ್ತೇನೆ ಕೇಳು. ನಿನಗೆ ಮುಂದೆ ಉಜ್ಜಯಿನಿ ನಗರ ಸಿಗುತ್ತದೆ. ಅದು ಈ ನೆಲದ ಮೇಲಿನ ಸ್ವರ್ಗ. ನೀನು ಅಲ್ಲಿ ಮೇಲು ಮಾಳಿಗೆಯಲ್ಲಿ ರಸಿಕರಾಡುವ ಆಟದ ಭೋಗ ಕಳೆದುಕೊಳ್ಳಬೇಡ. ಆ ಊರ ಹೆಣ್ಣುಗಳ ಕಣ್ಣ ಮಿಂಚನ್ನು ಏನೆಂದು ವರ್ಣಿಸಲಿ? ಮಿನುಗಿ ಹೊಳೆವ ಆ ಕಣ್ಣ ಕುಡಿಯ ಲಲ್ಲೆಯನ್ನು ಒಪ್ಪಿಕೊಳ್ಳದಿದ್ದರೆ ನಿನ್ನ ಕಣ್ಣಿದ್ದೂ ವ್ಯರ್ಥ.

28

**ನಿನ್ನ ಕಂಡು ನಿರ್ವಿಂಧ್ಯೆ[2] ಮುಂದೆ, ತೆರೆ ತೆರೆದು, ಅಂಚೆ ಉಲಿಸಿ**
**ಗೆಜ್ಜೆಪಟ್ಟಿ ಗಿಲುಕೆನಿಸಿ[3], ಎಡವಿ, ಸುಳಿನಾಭಿ ತೋರಿ ನಲಿಸಿ–[4] ॥**
**ಹಾದಿಯಲ್ಲಿ ಬರೆ, ಆಗು ಸಮರಸಿಯು ಕೇಳಬೇಡ ಬದಲು**
**ಹೆಣ್ಣಿನೊಲವಿನಲಿ ಮಳ್ಳ ಮರುಕವೇ[5] ಮಾತಿಗಿಂತ ಮೊದಲು ॥**

ನೀನು ಹಾಗೆ ಹೋಗುವಾಗ ನಿನ್ನ ಕಂಡು ನಿರ್ವಿಂಧ್ಯಾ ನದಿಯು ತೆರೆತೆರೆಗಳಲ್ಲಿ ಬಳುಕಾಡುತ್ತಾಳೆ. ನಡಿಗೆಯ ಗೆಜ್ಜೆಪಟ್ಟಿ ಗಿಲುಕೆನಿಸುವಂತೆ, ಹಂಸಪಕ್ಷಿಗಳನ್ನು ಉಲಿಸಿ

---

[1] ಉಜ್ಜಯಿನಿ ಅವಂತಿಯ ರಾಜಧಾನಿ. ಇದು ಸಿಪ್ರಾ ನದಿಯ ದಡದಲ್ಲಿದೆ. ಉಜ್ಜಯಿನಿಗೆ ವಿಶಾಲಾ, ಅವಂತಿಕಾ, ಪುಷ್ಪಕರಂಡಿನೀ ಮುಂತಾದ ಹೆಸರುಗಳಿವೆ. ವಿಕ್ರಮಾದಿತ್ಯನ ರಾಜಧಾನಿಯಾಗಿದ್ದ ಉಜ್ಜಯಿನಿ ಕವಿ ಕಾಳಿದಾಸನ ಸ್ವಂತ ಊರಾಗಿತ್ತು ಎಂದು ಕೆಲವು ವಿದ್ವಾಂಸರು ಊಹಿಸುತ್ತಾರೆ. ಭಾರತದ ಏಳು ಪುಣ್ಯಕ್ಷೇತ್ರಗಳಲ್ಲಿ ಉಜ್ಜಯಿನಿಯೂ ಒಂದು (ಅಯೋಧ್ಯಾ ಮಥುರಾ ಮಾಯಾ ಕಾಶೀ ಕಾಂಚೀ ಅವಂತಿಕಾ । ಪುರೀ ದ್ವಾರಾವತೀ ಚೈವ ಸಪ್ತೈತಾ ಮೋಕ್ಷದಾಯಕಾಃ).

[2] ವಿಂಧ್ಯ ಪರ್ವತದಲ್ಲಿ ಹುಟ್ಟುವ ನಿರ್ವಿಂಧ್ಯೆ ಎಂಬ ಹೆಸರಿನ ಈ ಪುಟ್ಟ ನದಿಯನ್ನು ಕವಿ ಇಲ್ಲಿ ಒಂದು ಹೆಣ್ಣಿಗೆ ಹೋಲಿಸಿದ್ದಾನೆ.

[3] ನದಿಯ ಅಲೆಯ ಸದ್ದನ್ನು ಹೆಣ್ಣಿನ ಗೆಜ್ಜೆಯ ಸದ್ದಿಗೆ ಹೋಲಿಸಿದ್ದಾನೆ.

[4] ಹರಿವ ನದಿ ಬಂಡೆಗೆ ತಾಗಿ ಎಡವಿದಾಗ ಸುಳಿ ಹುಟ್ಟಿಕೊಳ್ಳುತ್ತದೆ. ಆ ಸುಳಿಯನ್ನು ಹೆಣ್ಣಿನ ಸುಳಿನಾಭಿಗೆ ಹೋಲಿಸಿದ್ದಾನೆ.

[5] ಪ್ರೇಮಭಾವದ ಸೂಚನೆ ಮಳ್ಳಮುರುಕ ಅವಳ ಪ್ರೇಮದ ಅಭಿವ್ಯಕ್ತಿಯಾಗಿದೆ. ತನ್ನ ಪ್ರೇಮವನ್ನು ಅವಳು ನುಡಿದು ತಿಳಿಸುವುದಿಲ್ಲ.

ಹಾಡಿಸುತ್ತಾಳೆ. ಎಡವಿ ತನ್ನ ಸುಳಿನಾಭಿಯನ್ನು ತೋರಿಸುತ್ತಾಳೆ. ಹೀಗೆ ನಿನ್ನ ಹಾದಿಯಲ್ಲಿ ಬಳುಕುತ್ತ ಎದುರಾಗುತ್ತಾಳೆ. ನೀನು ಬದಲು ಮಾತನಾಡದೇ ಸಮರಸವಾಗಿ ಅವಳನ್ನು ಸೇರು. ಹೆಣ್ಣಿನೊಲವಿನಲಿ ಮಳ್ಳ ಮರುಕವೇ ಮಾತಿಗಿಂತ ಮೊದಲು.

29

**ಹೆಳಲು ಇಳಿದು[1] ಒಕ್ಕಾಲು ಉಳಿದು, ನಡೆದಿಹಳು ತೆಳ್ಳಗಾಗಿ[2]**
**ದಡದ ಮರದ ಒಣ ಎಲೆಗಳುದುರಿ ತನ್ನುದರ ಬೆಳ್ಳಗಾಗಿ ॥**
**ನೀನು ಸೊಬಗ,[3] ನಿನ್ನಿಂದ ಅಗಲಿ ತಾ ಸೊರಗಿ ಸಣ್ಣಗಹಳು**
**ದೈವದಿಂದ ನಿನ್ನನ್ನು ಸೇರಿ ಮೈದುಂಬಿಕೊಳ್ಳಬಹುದು ॥**

ಅವಳ ಹರಿವ ನೀರ ಜಡೆ ಇಳಿದು ಒಕ್ಕಾಲು ಉಳಿದಿದೆ. ತೆಳ್ಳಗಾಗಿದ್ದಾಳೆ. ದಡದಲ್ಲಿರುವ ಮರದ ಒಣ ಎಲೆಗಳು ಉದುರಿ, ಅವಳ ಉದರ ಬೆಳ್ಳಗಾಗಿದೆ. ನೀನು ಸೊಬಗ, ನಿನ್ನಿಂದ ಅಗಲಿದ ಅವಳು ಸಣ್ಣಗಾಗಿದ್ದಾಳೆ. ಸುದೈವದಿಂದ ನಿನ್ನನ್ನು ಸೇರಿ ಅವಳು ಮೈತುಂಬಿಕೊಳ್ಳುತ್ತಾಳೆ.

30

**ಬಂದವಂತಿ[4] ನಾಡಿನಲಿ ಉದಯನನ[5] ಕಥೆಯ ಬಲ್ಲರೆಲ್ಲಿ[1]**

---

[1] ನದಿ ನೀರಿಲ್ಲದೆ ಬತ್ತಿಹೋಗಿದೆ. ಇಂತಹ ನದಿಯನ್ನು ಕವಿ ಹೆಣ್ಣಿನ ಜಡೆಯನ್ನು ಹೋಲುವಂತೆ ತೆಳ್ಳಗೆ ಹರಿಯುತ್ತಿದೆ ಎಂದು ವರ್ಣಿಸಿದ್ದಾನೆ.

[2] ನಿರ್ವಿಂಧ್ಯೆಯಿಂದ ಮುಂದೆ 'ಸಿಂಧೂ' ಎಂಬ ಹೆಸರಿನ ಮತ್ತೊಂದು ನದಿ ಹರಿಯುತ್ತಿದೆ. ಆ ನದಿಯ ವರ್ಣನೆ ಇದು. ಇಲ್ಲಿ ಸಿಂಧು ಎಂದರೆ ಪ್ರಸಿದ್ಧ ಸಿಂಧೂನದಿಯಲ್ಲ. ವಿಂಧ್ಯಪರ್ವತದಲ್ಲೂ ಪುಟ್ಟದೊಂದು ಸಿಂಧೂ ನದಿ ಇದೆ. ಅದನ್ನು ಕಾಳೀಸಿಂಧು ಎಂದು ಕರೆಯುತ್ತಾರೆ. ಇದು ಬಂಗೀ ಎಂಬ ಸ್ಥಳದಲ್ಲಿ ಹುಟ್ಟಿ ಚಂಬಲ್ ಕಣಿವೆಯಲ್ಲಿ ಧುಮುಕುತ್ತದೆ.

[3] ಮೂಲದ 'ಸೌಭಾಗ್ಯ' ಎಂಬ ಪದ ಬೇಂದ್ರೆಯಲ್ಲಿ 'ಸೊಬಗ'ವಾಗಿದೆ.

[4] ಅವಂತಿ: ನರ್ಮದೆಯ ಉತ್ತರ ತೀರದಲ್ಲಿರುವ ಒಂದು ದೇಶ, ಮಾಳ್ವದ ಪೂರ್ವದಲ್ಲಿರುವ ಅವಂತಿ ಸುಮಾರು 900 ಚದರ ಮೈಲಿ ವಿಸ್ತೀರ್ಣದ್ದು.

[5] ಉದಯನ: ಚಂದ್ರವಂಶದ ದೊರೆ. ವತ್ಸದೇಶದ ರಾಜನಾದ ಇವನಿಗೆ ವತ್ಸರಾಜನೆಂಬ ಹೆಸರೂ ಇದೆ. ಯಮುನಾ ತೀರದಲ್ಲಿದ್ದ ಕೌಶಾಂಬಿ ಇವನ ರಾಜಧಾನಿಯಾಗಿತ್ತು. ಕೌಶಾಂಬಿ ಒಂದು ಐತಿಹಾಸಿಕ ನಗರವಾಗಿದ್ದು 11ನೇ ಶತಮಾನದ ಶಾಸನಗಳಲ್ಲಿ ಕೌಶಾಂಬಿಯ ಹೆಸರು ಉಲ್ಲೇಖಗೊಂಡಿದೆ. ಪೈಶಾಚೀ ಭಾಷೆಯಲ್ಲಿ ಗುಣಾಢ್ಯ ಬರೆದ 'ಬೃಹತ್ಕಥೆ'ಯಲ್ಲಿ ಉದಯನನ ಕಥೆ ಬರುತ್ತದೆ. ಇದನ್ನು ಕ್ಷೇಮೇಂದ್ರ (ಬೃಹತ್ಕಥಾ ಮಂಜರಿ) ಮತ್ತು ಸೋಮದೇವರು (ಕಥಾಸರಿತ್ಸಾಗರ) ಸಂಸ್ಕೃತಕ್ಕೆ ಅನುವಾದಿಸಿದ್ದಾರೆ. ಇವನ ಕಥೆಯನ್ನಾಧರಿಸಿ ಭಾಸನು ಪ್ರತಿಜ್ಞಾ ಯೌಗಂಧರಾಯಣ ಮತ್ತು ಸ್ವಪ್ನವಾಸವದತ್ತ ಎಂಬ ನಾಟಕಗಳನ್ನು ಬರೆದಿದ್ದಾನೆ. ಉದಯನನ ಸಂಕ್ಷಿಪ್ತ ಕಥೆ: ಪ್ರದ್ಯೋತ ಮಹಾರಾಜ ಉಜ್ಜಯಿನಿಯ ದೊರೆಯಾಗಿದ್ದ. ಅವನು ತನ್ನ ಮಗಳು ವಾಸವದತ್ತೆಯನ್ನು ಸಂಜಯನೆಂಬ ರಾಜನಿಗೆ ಕೊಟ್ಟು ವಿವಾಹ ಮಾಡಬೇಕೆಂದು ಬಯಸಿದ್ದ. ಆದರೆ ಅವಳಿಗೆ ಉದಯನನಲ್ಲಿ ಪ್ರೇಮಾಂಕುರವಾಗಿತ್ತು. ಅವನನ್ನು ಒಮ್ಮೆಯೂ ಭೇಟಿಯಾಗಿರದಿದ್ದರೂ ಕನಸಿನಲ್ಲಿ ಅವನನ್ನು ಅವಳು ಕಂಡಿದ್ದಳು, ಅವನನ್ನು

**ಅಲ್ಲಿ ಸಿರಿಯು ಹರಹಿರುವಪೂರ್ವಪುರವಿಹುದು[2] ನಿಲ್ಲು ಅಲ್ಲಿ ॥**
**ಪುಣ್ಯವಂತರೋ, ಪುಣ್ಯತೀರಲಿರೆ ಸ್ವಲ್ಪೆ ಉಳಿಯಲಾಗ**
**ಸ್ವರ್ಗದೊಂದು ತುಣುಕನ್ನೆ ತಂದರೋ ಇಳೆಗೆ ಇಳಿಯುವಾಗ ॥[3]**

ಮುಂದೆ ಬರುವ ಅವಂತೀನಾಡಿನಲ್ಲಿ ಉದಯನನ ಕಥೆಯನ್ನು ಎಲ್ಲರೂ ಬಲ್ಲರು. ಅಲ್ಲಿ ಸಂಪತ್ತೇ ವಿಸ್ತಾರವಾಗಿ ಹರಡಿಕೊಂಡಿರುವ ಉಜ್ಜಯಿನಿ ಇದೆ. ನೀನು ಅಲ್ಲಿ ನಿಲ್ಲು. ಪುಣ್ಯವಂತರು ತಮ್ಮ ಪುಣ್ಯ ತೀರಿ ಸ್ವಲ್ಪ ಉಳಿಯಲು ಆಗ ಅದರ ತುಣುಕನ್ನು ಇಳೆಗೆ ಇಳಿಯುತ್ತ ತಂದರೋ ಎಂಬಂತೆ ಆ ನಗರವಿದೆ.

31

**ಮತ್ತ ಹಂಸಗಳ ಮತ್ತಿನುಲಿವನೇ ಮತ್ತೆ ಎಳೆದು ಬಳಸಿ**
**ಬೆಳಗಿನಲ್ಲಿ ಅರಳಿರುವ ತಾವರೆಯ ಕಂಪಕೆಳೆಯ ಬೆಳೆಸಿ ॥**
**ಸುಸಿಲನಲಸಿಕೆಯ ಕಳೆವುದಲ್ಲಿ ಶಿಪ್ರಾವಾತದಂತೆ[4]**
**ಮಧುರವಾಗಿಯೇ ಚದುರನಾಡುತಿಹ ಬಲ್ಲ ನಲ್ಲನಂತೆ ॥[5]**

---

ಪ್ರೇಮಿಸಲಾರಂಭಿಸಿದ್ದಳು. ಇದನ್ನರಿತ ಪ್ರದ್ಯೋತನು ಅವನನ್ನು ಸೆರೆಹಿಡಿದು ತನ್ನ ನಗರದಲ್ಲಿ ಬಂದಿಯಾಗಿಸಿದ. ಆದರೆ ಉದಯನ ಅಲ್ಲಿಂದ ತಪ್ಪಿಸಿಕೊಂಡು ಹೋಗುತ್ತಾನೆ, ಜೊತೆಗೆ ತನ್ನನ್ನು ಪ್ರೀತಿಸುತ್ತಿದ್ದ ರಾಜಕುಮಾರಿ ವಾಸವದತ್ತೆಯನ್ನೂ ಹಾರಿಸಿಕೊಂಡು ಹೋಗುತ್ತಾನೆ. ಕತೆಯಲ್ಲಿ ಮುಂದೆ ಅವರಿಬ್ಬರು ಅನುಭವಿಸಿದ ಸುಖದುಃಖಗಳ ಸುದೀರ್ಘ ನಿರೂಪಣೆ ಇದೆ.

[1] ಅವಂತಿಯ ಹಿರಿಯ ನಾಗರಿಕರು ಈಗಲೂ ಸದಾ ಉದಯನನ ಕತೆಯನ್ನೇ ಕುರಿತು ಚರ್ಚಿಸುತ್ತಿರುತ್ತಾರೆ.

[2] ಕಾಳಿದಾಸನ 'ವಿಶಾಲ' ಎಂಬ ಪದವನ್ನು ಬೇಂದ್ರೆ 'ಹರಹು' ಎಂದು ಅನುವಾದಿಸಿದ್ದಾರೆ. ವಿಶಾಲ ಎಂಬ ಪದಕ್ಕೆ ಹರಹು ಎಂಬರ್ಥವಿದೆ. ಜೊತೆಗೆ ಉಜ್ಜಯಿನಿ ಎಂಬ ಅರ್ಥವೂ ಇದೆ.

[3] ಈ ಪದ್ಯ ಭಗವದ್ಗೀತೆಯ ಈ ಸಾಲುಗಳನ್ನು ನೆನಪಿಸುತ್ತದೆ: ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ (ಅವರು ವಿಶಾಲವಾದ ಸ್ವರ್ಗಲೋಕದಲ್ಲಿ ಸುಖವನ್ನು ಅನುಭವಿಸಿ ಪುಣ್ಯ ಕ್ಷೀಣವಾಗುತ್ತಿದ್ದಂತೆ ಮರ್ತ್ಯಲೋಕಕ್ಕೆ ಪ್ರವೇಶಿಸುತ್ತಾರೆ) –ಗೀತೆ 9.21

[4] ಉಜ್ಜಯಿನಿ ಶಿಪ್ರಾ ನದಿಯ ದಡದಲ್ಲಿದೆ.

[5] ಮೂಲ ಸಂಸ್ಕೃತ ಕಾವ್ಯದಲ್ಲಿ ಈ ಕೆಳಗಿನ ಎರಡು ಪದ್ಯಗಳಿವೆ. ಆದರೆ ಈ ಪದ್ಯಗಳನ್ನು ಬೇಂದ್ರೆ ಅನುವಾದಿಸಿಲ್ಲ:

ಹಾರಾಂಸ್ತಾರಾಂಸ್ತರಲಗುಟಿಕಾಂಕೋಟಿಶಃ ಶಂಖಶುಕ್ತಿಃ
ಶಷ್ಪಶ್ಯಾಮಾನ್ಮರಕತಮಣೀನುನ್ಮಯೂಖಪ್ರರೋಹಾನ್ ॥
ದೃಷ್ಟ್ವಾ ಯಸ್ಯಾಂ ವಿಪಣಿರಚಿತಾನ್ವಿಂದ್ರುಮಾಣಾಂ ಚ ಭಂಗಾನ್
ಸಲ್ಲಕ್ಷ್ಯಂತೇ ಸಲಿಲನಿಧಯಸ್ತೋಯಮಾತಾವಶೇಷಾಃ ॥
ಪ್ರದ್ಯೋತಸ್ಯ ಪ್ರಿಯದುಹಿತರಂ ವತ್ಸರಾಜೋಽತ್ರ ಜಹ್ನೇ
ಹೈಮಂ ತಾಲದ್ರುಮವನಮಭೂದತ್ರ ತಸ್ಯೈವ ರಾಜ್ಞಾಃ ॥
ಅತ್ರೋದ್ಭ್ರಾಂತಃ ಕಿಲ ನಲಗಿರಿಃ ಸ್ತಂಭಮುತ್ಪಾಠ್ಯ ದರ್ಪಾ–
ದಿತ್ಯಾಗಂತುಕ್ರಮಯತಿ ಜನೋ ಯತ್ರ ಬಂಧೂನಭಿಜ್ಞಃ ॥

ಓ ಗೆಳೆಯನೇ, ನೀನು ಸಾಗುವಾಗ ಸಂತೋಷದಿಂದ ಮೈಮರೆತ ಹಂಸಗಳ ಉನ್ಮತ್ತ ಉಲಿವನ್ನೇ ಮತ್ತೆ ಎಳೆದು ಬಳಸು. ಬೆಳಗಿನಲ್ಲಿ ಅರಳಿರುವ ತಾವರೆಯ ಕಂಪಿನ ಕೆಳೆತನವನ್ನು ಬೆಳೆಸು. ಶಿಪ್ರಾ ನದಿಯ ಮಂದಗಾಳಿಯಂತೆ ಜಾಣ ಮಾತನಾಡುತ್ತಿರುವ ತಿಳಿದ ನಲ್ಲನಂತೆ ಸಂಭೋಗದ ಆಲಸ್ಯವನ್ನು ಕಳೆ.

32

**ಕೇಶ–ಧೂಪ ಎಳೆದಾವು ನಿನ್ನ, ಬೆಳಕಂಡಿಯಿಂದ ಹರಿದು[1]**
**ನೀಲಿಬಣ್ಣ ನೀನಣ್ಣ, ನವಿಲು ನಲಿದಾವು ಕುಣಿದು ಕರೆದು ॥[2]**
**ಅಲಸುಗಳೆಯೊ ಆ ಕಂಪು ಮಾಡಗಳಲೇನು ಇಂದ್ರ ಮೋಡಿ**
**ನಡೆದು ನೀರೆಯರು ಬಣ್ಣ ಬಳೆದು ಅಂಗಾಲ ಪದ್ಮ ಮೂಡಿ ॥[3]**

ಬೆಳಕಿಂಡಿಯಿಂದ ಹರಿದು ಕೇಶಧೂಪ ನಿನ್ನನ್ನು ಸೆಳೆಯುತ್ತದೆ. ಅಣ್ಣ, ನೀನು ನೀಲಿ ಬಣ್ಣದವನು. ಹಾಗಾಗಿ ನವಿಲು ನಲಿದು ಕುಣಿದು ನಿನ್ನನ್ನು ಕರೆಯುತ್ತದೆ. ಅಲ್ಲಿಯ ನೀರೆಯರು ತಮ್ಮ ಅಂಗಾಲಿಗೆ ಬಣ್ಣ ಬಳಿದು ಸಿಂಗಾರ ಮಾಡಿಕೊಂಡಿದ್ದಾರೆ. ಆ ಅಂಗಾಲ ಪದ್ಮ ಆ ಕಂಪು ಮಾಡಗಳಲ್ಲಿ ಮೂಡಿ ಉಂಟು ಮಾಡಿರುವ ಇಂದ್ರ ಮೋಡಿಯ ಮರ್ಮ ತಿಳಿಯಲಾಗದು. ಗೆಳೆಯ ಅಲ್ಲಿ ನಿನ್ನ ದಣಿವಾರಿಸಿಕೋ.

33.

**ರುದ್ರ ಗಣವು ಬಾಗೀತು ನಿನಗೆ, ಹೇ ಕೊರಳ ಗರಳ ವರಣಾ[4]**

---

ಶಂಖ, ಶುಕ್ತಿ, ಮರಕತ, ಮಯೂಖ, ಮುಂತಾದ ರತ್ನಗಳಿಂದ ಮಾಡಿದ ಹಾರಗಳನ್ನು ಅಸಂಖ್ಯವಾಗಿ ಹರಡಿಕೊಂಡು ಮಾರಾಟ ಮಾಡುತ್ತಿರುವುದನ್ನು ನೋಡಿದರೆ ಸಮುದ್ರದಲ್ಲಿ ನೀರೊಂದನ್ನು ಬಿಟ್ಟು ಮತ್ತೇನೂ ಉಳಿದಿಲ್ಲ ಎನಿಸುತ್ತದೆ.

ಅಲ್ಲಿಯ ಜನ ಈ ರೀತಿ ಮಾತನಾಡಿಕೊಳ್ಳುತ್ತಾರೆ: ವತ್ಸರಾಜನ (ಉದಯನನ) ರಾಜ್ಯ ಇದೋ ಇಲ್ಲೇ ಇದ್ದುದು, ಅದೋ ಅಲ್ಲೇ ಅವನು ಪ್ರದ್ಯೋತನಮಗಳನ್ನು ಹಾರಿಸಿಕೊಂಡು ಹೋದುದು, ರಾಜ ಮನೆತನಕ್ಕೆ ಸೇರಿದ ತಾಲು ವೃಕ್ಷವನ್ನು ಮದಿಸಿದ ಪಟ್ಟದ ಆನೆ ಇಲ್ಲೇ ಬುಡ ಸಮೇತವಾಗಿ ಕಿತ್ತು ಎಸೆದದ್ದು.

ತನ್ನ ತವರೂರಾದ ಉಜ್ಜಯಿನಿಯ ಮೇಲಿನ ಪ್ರೀತಿಯಿಂದ ಕಾಳಿದಾಸನ ಔಚಿತ್ಯವಿವೇಕ ಎಲ್ಲೋ ಹಾದಿತಪ್ಪಿದೆ ಎಂದು ಪ್ರಾಯಶಃ ಬೇಂದ್ರೆ ಭಾವಿಸಿದ್ದಿರಬಹುದು.

[1] ಉಜ್ಜಯಿನಿಯ ಹೆಣ್ಣು ಮಕ್ಕಳು ಸ್ನಾನ ಮಾಡಿ ತಲೆಗೆ ಸಾಂಬ್ರಾಣಿ ಹೊಗೆ ಹಾಕಿಕೊಳ್ಳುವಾಗ ಮೋಡದ ರೂಪದಲ್ಲೇ ಇರುವ ಆ ಹೊಗೆ ಮೋಡವನ್ನು ಸೆಳೆಯಬಹುದು.

[2] ಮೋಡ ಮತ್ತು ನವಿಲುಗಳ ಮಧ್ಯೆ ವಿಶೇಷ ಮೈತ್ರಿ ಇದೆ ಎಂಬುದನ್ನು ಈ ಹಿಂದೆ ಗಮನಿಸಲಾಗಿದೆ.

[3] ಕಾಲಿಗೆ ಮದರಂಗಿ (ಮೆಹಂದಿ) ಹಚ್ಚಿಕೊಂಡು ಹೆಂಗಸರು ಉಪ್ಪರಿಗೆಯಲ್ಲಿ ಓಡಾಡುವಾಗ ಅವರ ಹೆಜ್ಜೆ ಗುರುತುಗಳು ನಿನ್ನನ್ನು ಸೆಳೆಯಬಹುದು.

[4] ದೇವಾಸುರರು ಅಮೃತಕ್ಕಾಗಿ ಸಮುದ್ರ ಮಂಥನ ಮಾಡಿದಾಗ ಕಾಲಕೂಟ ವಿಷ ಉದ್ಭವಿಸುತ್ತದೆ. ಶಿವ ಅದನ್ನು ಕುಡಿದಾಗ ಅವನ ಕಂಠ ವಿಷದ ಬಣ್ಣಕ್ಕೆ, ನೀಲಿ ಬಣ್ಣಕ್ಕೆ ತಿರುಗುತ್ತದೆ.

**ಕಾಣು ಹೋಗು ಶ್ರೀ ಚಂಡಿಪತಿಯ[1] ಮಾಂಕಾಳ[2] ಪುಣ್ಯ ಚರಣಾ ॥**
**ಅವನ ತೋಟದಲಿ ಗಾಳಿ ತೀಡುವದು ಗಂಧವತಿಯನೆರೆದು**
**ಕಮಲಗಂಧಿಯರು ಮಿಂದ ನೀರಿಗರವಿಂದ ಗಂಧ ಬೆರೆದು ॥**

ಶಿವನ ಎಂಟು ರೂಪಗಳಲ್ಲಿ ಆಕಾಶ ತತ್ವವೂ ಒಂದು.[3] ಆಕಾಶದಲ್ಲಿ ನೀಲವರ್ಣನಾದ ನಿನ್ನನ್ನು ಕಂಡು ಇದು ನಮ್ಮ ಸ್ವಾಮಿಯ ಕುತ್ತಿಗೆ ಎಂದು ಭಾವಿಸಿ ಶಿವಗಣವು ನಿನ್ನನ್ನು ಗೌರವದಿಂದ ನೋಡಿ ಬಾಗಿ ಸ್ವಾಗತಿಸುವುದು. ಉಜ್ಜಯಿನೀ ನಗರದ ತ್ರಿಭುವನ ಗುರುವಾದ ಶ್ರೀ ಚಂಡೀಪತಿ ಮಹಾಕಾಲನ ಪುಣ್ಯಚರಣಗಳ ದರ್ಶನಕ್ಕೆ ಹೋಗು. ಅಲ್ಲಿ ಗಂಧವತೀ ಎಂಬ ನದಿಯಲ್ಲಿ ಸುಂದರ ಸ್ತ್ರೀ ಕಮಲಗಂಧಿಯರು ಮೀಯುವರು. ಆ ನೀರಿಗೆ ಕಮಲಗಂಧ ಬೆರೆತು ಹೋಗುವುದು. ಮಹಾಕಾಲನ ತೋಟದಲ್ಲಿ ಆ ಗಂಧದ ಗಾಳಿ ತೀಡುವುದು.

34

**ನಿನ್ನ ಕಣ್ಣ ಹೊಲದಾಚೆಗಾಗಿ ರವಿ ತಣ್ಣಗಿರುವವರೆಗೂ**
**ಸುಳ್ಳೆ ಪಳ್ಳೆ ತರಹರಿಸಬೇಡ, ಇರು ಅಲ್ಲೆ ಬೈಗ ಮರೆಗೂ ॥[4]**
**ದೇವ ಸೇವೆ ನಡೆದಾಗ ಸಂಜೆ ದುಂದುಭಿಯ ಮೊಳಗು ನೀನು**
**ಪೂಜ್ಯವಸ್ತುವಿನ ಪೂಜೆಗೊದಗದಾ ನಾದವಿದ್ದು ಏನು? ॥**

---

[1] ಈ ಪದಕ್ಕೆ ಎರಡು ಅರ್ಥಗಳಿವೆ: ಒಂದು: ಚಂಡ ಎಂಬುದು ಪ್ರಮಥ ಗಣದ ಒಬ್ಬ ನಾಯಕನ ಹೆಸರು, ಚಂಡನ ಒಡೆಯ. ಎರಡು: ಚಂಡೀ ಎಂಬುದು ಪಾರ್ವತಿಯ ಮತ್ತೊಂದು ಹೆಸರು. ಅವಳ ಗಂಡ ಎಂಬುದು ಎರಡನೆಯ ಅರ್ಥವಾಗಿದೆ.

[2] ಉಜ್ಜಯಿನಿಯ ಮಹಾಕಾಲೇಶ್ವರ ಹನ್ನೆರಡು ಜ್ಯೋತಿರ್ಲಿಂಗಗಳ ಪೈಕಿ ಒಂದು. ದ್ವಾದಶ ಜ್ಯೋತಿರ್ಲಿಂಗಗಳು: ಸೌರಾಷ್ಟ್ರೇ ಸೋಮನಾಥಂ ಚ ಶ್ರೀಶೈಲೇ ಮಲ್ಲಿಕಾರ್ಜುನಮ್ । ಉಜ್ಜಯಿನ್ಯಾ ಮಹಾಕಾಲಂ ಓಂಕಾರಮಮಲೇಶ್ವರಮ್ ॥ ಪರಳ್ಯಾಂ ವೈದ್ಯನಾಥಂ ಚ ಡಾಕಿನ್ಯಾಂ ಭೀಮಶಂಕರಮ್। ಸೇತುಬಂಧೇತು ರಾಮೇಶಂ ನಾಗೇಶಂ ದಾರುಕಾವನೇ ॥ ವಾರಣಸ್ಯಾಂತು ವಿಶ್ವೇಶಂ ತ್ರ್ಯಂಬಕಂ ಗೌತಮೀತಟೇ । ಹಿಮಾಲಯೇತು ಕೇದಾರಂ ಗೃಷ್ಣೇಶಂ ಚ ಶಿವಾಲಯೇ ॥ (ಘುಶ್ಮೇಶ್ವರ ರಾಜಾಸ್ಥಾನದಲ್ಲಿದೆ) ಏತಾನಿ ಜ್ಯೋತಿರ್ಲಿಂಗಾನಿ ಸಾಯಂ ಪ್ರಾತಃ ಪಠೇನ್ನರಃ । ಸಪ್ತಜನ್ಮ ಕೃತಂ ಪಾಪಂ ಸ್ಮರಣೇನ ವಿನಶ್ಯತಿ ॥

[3] ಶಿವನ ಅಷ್ಟರೂಪಗಳು: ಶರ್ವ (ಭೂಮಿತತ್ವ), ಭವ (ಜಲತತ್ವ), ರುದ್ರ (ಅಗ್ನಿತತ್ವ), ಉಗ್ರ (ವಾಯುತತ್ವ), ಭೀಮ (ಆಕಾಶತತ್ವ), ಪಶುಪತಿ (ಆತ್ಮತತ್ವ), ಈಶಾನ (ಸೂರ್ಯತತ್ವ) – ಶತಪಥ ಬ್ರಾಹ್ಮಣ. ಶುಭ್ರಾಕಾಶದಲ್ಲಿ ನೀಲಿಬಣ್ಣದ ಮೋಡದ ಆಗಮನವನ್ನು ಕಾಣುವ ರುದ್ರಗಣ ಸಹಜವಾಗಿಯೇ ಶಿವನೇ ಆಗಮಿಸುತ್ತಿದ್ದಾನೆ ಎಂದು ಅಪಾರ್ಥ ಮಾಡಿಕೊಳ್ಳುತ್ತದೆ.

[4] ಮೂಲ ಸಂಸ್ಕೃತದಲ್ಲಿ 'ಅತ್ಯೇತಿ', 'ಅಭ್ಯೇತಿ' ಎಂಬ ಪಾಠಾಂತರಗಳಿದ್ದು ಕೆಲವು ವ್ಯಾಖ್ಯಾನಕಾರರು ಸೂರ್ಯ ಮುಳುಗುವವರೆಗೂ ಇರು ಎಂದೂ ಮತ್ತೆ ಕೆಲವರು ಸೂರ್ಯೋದಯವಾಗುವವರೆಗೂ ಇರು ಎಂದೂ ವ್ಯಾಖ್ಯಾನಿಸಿದ್ದಾರೆ. ಮೋಡ ಉಜ್ಜಯಿನಿಗೆ ಬರುವ ವೇಳೆಗಾಗಲೇ ಸೂರ್ಯೋದಯ ಆಗಿಯೇ ಇರುವ ಕಾರಣ ಸೂರ್ಯೋದಯವಾಗುವವರೆಗೂ ಎಂಬ ವ್ಯಾಖ್ಯಾನ ಅರ್ಥಹೀನ.

ಹೇ ಮಧುರ ಗೆಳೆಯನೇ, ನಿನ್ನ ದೃಷ್ಟಿ ಹರಿಯುವವರೆಗೂ ಇರುವ ರವಿ ತಣ್ಣಗಾಗುವವರೆಗೂ ಕಾಯಿ, ಸುಮ್ಮನೆ ಆತುರ ಪಡಬೇಡ. ಸಂಜೆಯಾಗುವವರೆಗೂ ಅಲ್ಲಿಯೇ ಇದ್ದು ಚಂಡೀಪತಿ ಮಹಾಕಾಲನಿಗೆ ಪೂಜೆ ನಡೆಯುವಾಗ ನಿನ್ನ ದುಂದುಭಿಯನ್ನು ಮೊಳಗಿಸು. ಪೂಜ್ಯ ವಸ್ತುವಿಗೆ ಒದಗದಿದ್ದರೆ ನಿನ್ನಲ್ಲಿ ಅಡಕವಾಗಿರುವ ನಾದವಿದ್ದು ಪ್ರಯೋಜನವೇನು?

35

**ದೇವದಾಸಿಯರು[1] ಹೆಜ್ಜೆ ಹಾಕಿ ನಡುಗೆಜ್ಜೆ ಕುಣಿಸಿ ನವುರಿ,**
**ಬಳ್ಳಿತೋಳು ಬಳುಕಾಡೆ ಬೀಸುವರು ರನ್ನಗಾವಚವರಿ ॥**
**ನಿನ್ನ ಮೊದಲ ಹನಿ ಉಗುರು–ತಾಣ ತಂಗೊಳಿಸೆ ಎದೆಯ ತಾಗಿ[2]**
**ನೋಟ ಬೀರುವರು ನಿನ್ನಕಡೆಗೆ ತುಂತುಂಬಿ ಮಾಲೆಯಾಗಿ ॥[3]**

ಆ ಮಹಾಕಾಲನ ಪೂಜಾ ಸಮಯದಲ್ಲಿ ದೇವದಾಸಿಯರು ಹೆಜ್ಜೆ ಹಾಕಿ ನಡುಗೆಜ್ಜೆಯನ್ನು ನವುರಾಗಿ ಕುಣಿಸುವರು. ಅವರ ಬಳ್ಳಿ ತೋಳು ಬಳುಕಾಡುತ್ತಿರಲು ತಮ್ಮ ಕೈಯ ರತ್ನಖಚಿತವಾದ ಚವರಿಯನ್ನು ಬೀಸುವರು. ನಿನ್ನ ಮೊದಲ ಉಗುರು ಹನಿ ಅವರ ಎದೆಯ ತಾಗಿ ಆ ನೆಲೆ ತಣ್ಣಗಾಗಲು ನಿನ್ನ ಕಡೆಗೆ ನೋಟ ಬೀರುವರು. ತುಂ ತುಂಬಿ ಮಾಲೆಯಾಗಿ ನಿನ್ನ ನೋಡುವರು!

36

**ಬಳಿಕ ಬೆಳೆದ ಉದ್ದುದ್ದ ಟೊಂಗೆ ಮರದುದಿಗಳಲ್ಲಿ ಒರಗಿ[4]**
**ಸಂಜೆಗೆಂಪು–ದಾಸಾಳ ಬಣ್ಣದವನಾಗಿ ನೀನು ಮೆರುಗಿ ॥**

---

[1] ಕಾಳಿದಾಸ ಬಳಸಿರುವ ವೇಶ್ಯಾ ಎಂಬ ಪದವನ್ನು ಬೇಂದ್ರೆ 'ದೇವದಾಸಿ' ಎಂದು ಅನುವಾದಿಸಿದ್ದಾರೆ. ಮಹಾಕಾಲೇಶ್ವರನ ಸನ್ನಿಧಾನದಲ್ಲಿ ಪ್ರತಿ ಸಂಜೆ ದೇವದಾಸಿ ನರ್ತನ ಮಾಡುವುದು ಸಾಮಾನ್ಯ. ವೇಶ್ಯೆ ಎಂಬ ಪದಕ್ಕೆ ದೇವದಾಸಿ ಎಂಬ ಅರ್ಥದ ಜೊತೆಗೆ 'ವೇಷ ಧರಿಸಿದ ಹೆಣ್ಣು' ಎಂಬ ಅರ್ಥವೂ ಇದೆ (ವೇಷೇನ ಶೋಭತೇ – ವೇಶ್ಯಾ) ಈ ಅರ್ಥ ಬೇಂದ್ರೆಯಲ್ಲಿ ಕಾಣಲಾಗದು.

[2] ಪ್ರೇಮಿಯ ನಖಕ್ಷತ ಹೆಣ್ಣನ್ನು ಘಾಸಿಗೊಳಿಸಿದರೆ, ಹೆಣ್ಣಿನಲ್ಲಿ ಕಾಮದ ತಾಪವನ್ನು ಉದ್ದೀಪಿಸಿದರೆ ನಿನ್ನ ಮೊದಲ ಹನಿಯ ಉಗುರು ತಾಣ ಅವಳ ಎದೆಯನ್ನು ತಂಪಾಗಿಸುತ್ತದೆ.

[3] ಹೀಗೆ ತಂಪುಗರೆವ ನಿನ್ನತ್ತ ದುಂಬಿಗೆ ಹೋಲುವ ಅವಳ ಕಣ್ಣುಗಳು ನೋಟ ಬೀರುತ್ತವೆ. ಹೆಣ್ಣಿನ ಕಣ್ಣೋಟದ ತೀಕ್ಷ್ಣತೆಯನ್ನು ದುಂಬಿಗಳ ಸಾಲಿಗೆ ಹೋಲಿಸುವುದು ಕಾಳಿದಾಸನಿಗೆ ಬಹು ಪ್ರಿಯವಾದ ಉಪಮೆಯಾಗಿದೆ (ವಿಲೋಲ ನೇತ್ರ ಭ್ರಮರೈರ್ಗವಾಕ್ಷಃ (ಅವಳ ಕಣ್ಣೋಟ ಭ್ರಮರಗಳ ಗವಾಕ್ಷವಾಗಿದೆ – ರಘುವಂಶ 7.11)

[4] ಉಜ್ಜಯಿನಿಯ ಸಮೀಪದ ಕಾಡಿನ ಉದ್ದನೆಯ ಮರಗಳನ್ನು ಶಿವನ ಉದ್ದನೆಯ ಅಸಂಖ್ಯ ತೋಳುಗಳಿಗೆ ಹೋಲಿಸಲಾಗಿದೆ. ಅವನ ತೋಳಿನಲ್ಲಿ ಹೋಗಿ ಸೇರಿಕೋ ಎಂದು ಯಕ್ಷ ಮೇಘನಿಗೆ ಸೂಚಿಸುತ್ತಿದ್ದಾನೆ.

**ಶಿವನು ಕುಣಿಯಲಿರೆ ಅವನ ತೊಡೆಯ ಹಸಿ ತೊವಲಿನಂದ ಮುಚ್ಚಿ**[1]
**ಮಾಡು ಅವನ ಸತಿ ನೋಡುವಂತೆ ದೃಢ ಭಕುತಿಯಿಂದ ಮೆಚ್ಚಿ ॥**

ಆ ಆಕರ್ಷಣೀಯ ನೋಟಕ್ಕೆ ನೀನು ಉಲ್ಲಸಿತನಾಗಿ ಉದ್ದುದ್ದ ಬೆಳೆದ ಮರದ ಟೊಂಗೆಯ ತುದಿಗಳಲ್ಲಿ ಒರಗು. ಸಂಜೆ ದಾಸವಾಳ ಬಣ್ಣದವನಾಗಿ ಕಂಗೊಳಿಸು. ಅವನು ಕುಣಿವಾಗ ಅವನ ತೊಡೆಯ ಹಸಿ ಚರ್ಮವನ್ನು ಮರೆ ಮಾಡು. ಹಾಗೆ ಕುಣಿವ ಅವನ ಲೀಲೆಯನ್ನು ಅವನ ಸತಿ ದೃಢಭಕ್ತಿಯಿಂದ ಮೆಚ್ಚಿ ನೋಡುವಂತೆ ಮಾಡು.

37

**ರಮಣರತ್ತ ಉಜ್ಜಯಿನಿ ರಮಣಿಯರು ಹೊರಟ ರಾತ್ರಿಯಲ್ಲಿ**
**ರಾಜಬೀದಿ ಕಗ್ಗತ್ತಲಾಗಿ**[2] **ಕಂಗೆಡಿಸೆ, ಮಿಂಚ ಚೆಲ್ಲಿ ॥**
**ದಾರಿದೋರು ಹೊಂಬೆಳಕ ಮಾಡಿ ಮಳೆ ಗುಡುಗು ಬೇಡೊ ಮೇಘಾ**[3]
**ಮೊದಲೆ ಹೆದರಿದವರವರೊ, ಕಳುವಿನಲಿ ಹೋಗಬೇಕು ಬೇಗಾ ॥**

ಉಜ್ಜಯಿನಿಯ ರಮಣಿಯರು ರಾತ್ರಿಯಲ್ಲಿ ತಮ್ಮೊಮ್ಮೆಯ ರಮಣರ ಕಡೆಗೆ ಸಾಗುತ್ತಿರಲು ರಾಜಬೀದಿ ಕತ್ತಲಾಗಿ ಕಂಗೆಡಿಸಿದೆ. ಈಗ ನೀನು ಮಿಂಚು ಚೆಲ್ಲಿ ಹೊಂಬೆಳಕು ಮಾಡಿ ದಾರಿ ತೋರಿಸು. ಹೇ ಪ್ರಿಯಸಖ ಮೇಘನೇ, ಮಳೆ ಗುಡುಗು ಬೇಡ, ಅವರು ಮೊದಲೇ ಹೆದರಿದ್ದಾರೆ. ಅವರು ಕಳುವಿನಲ್ಲಿ ಬೇಗನೆ ಹೋಗಬೇಕಾಗಿದೆ.

38

**ಪಾರಿವಾಳ ಹಲವಾರು ಮಲಗಿದೇಳನೆಯ ಮಾಡದೊಳಗೆ**

---

[1] ಗಜಾಸುರನೆಂಬ ರಾಕ್ಷಸ ದೇವತೆಗಳಿಗೆ ಹಾಗೂ ಋಷಿಮುನಿಗಳಿಗೆ ಭಯ ಹುಟ್ಟಿಸಿದಾಗ ಅವರೆಲ್ಲರೂ ಕಾಶಿಗೆ ಬಂದು ಶಿವನಿಗೆ ಮೊರೆ ಹೋಗುತ್ತಾರೆ. ಆಗ ಶಿವ ಗಜಾಸುರನನ್ನು ಕೊಂದು ಅವನ ಚರ್ಮವನ್ನು ಸುಲಿಯುತ್ತಾನೆ. ರಕ್ತ ತೊಟ್ಟಿಕ್ಕುತ್ತಿದ್ದ ಆ ಹಸಿಯ ಚರ್ಮವನ್ನೇ ಮೈಗೆ ಸುತ್ತಿಕೊಂಡು ಗೆಲುವಿನ ಸಂಭ್ರಮದಿಂದ ನರ್ತಿಸುತ್ತಾನೆ. ಅವನು ತಾಂಡವ ನೃತ್ಯ ಮಾಡುವಾಗಲೆಲ್ಲ ಗಜಚರ್ಮ ಧರಿಸುತ್ತಾನೆ ಎಂಬ ಪ್ರತೀತಿ ಇದೆ. ಮೋಡದ ಬಣ್ಣವೂ ಹೆಚ್ಚುಕಡಿಮೆ ಆನೆಯ ಚರ್ಮದ ಬಣ್ಣವೇ ಆಗಿರುವುದರಿಂದ ಗಜಚರ್ಮದ ಬದಲಾಗಿ ನೀನೇ ಶಿವನಿಗೆ ತೊಡುಗೆಯಾಗು ಎಂದು ಯಕ್ಷ ಸೂಚಿಸುತ್ತಿದ್ದಾನೆ. ಶಿವ ತನ್ನನ್ನು ಸುತ್ತುವರಿದ ಮೋಡವನ್ನೇ ಆನೆಯ ಚರ್ಮವೆಂದು ತಪ್ಪಾಗಿ ಭಾವಿಸಿ ತನ್ನ ತಾಂಡವ ನೃತ್ಯ ಪ್ರಾರಂಭಿಸುತ್ತಾನೆ. ರಕ್ತ ತೊಟ್ಟಿಕ್ಕುವ ಗಜ ಚರ್ಮದ ಭೀಭತ್ಸ ದೃಶ್ಯವನ್ನು ಕಂಡು ಉದ್ವಿಗ್ನಗೊಂಡಿದ್ದ ಪಾರ್ವತಿ ಆ ಜಾಗದಲ್ಲಿ ನಿನ್ನನ್ನು ಕಂಡು ಶಾಂತಳಾಗುತ್ತಾಳೆ. ದೃಢಭಕ್ತಿಯಿಂದ ಶಿವನನ್ನು ನೋಡಿ ಮೆಚ್ಚುತ್ತಾಳೆ.

[2] ಕಾಳಿದಾಸನು ಕತ್ತಲೆಯನ್ನು 'ಸೂಚಿಭೇದ್ಯ' (ಸೂಜಿಯಿಂದ ಚುಚ್ಚಿ ನೋಡಲು ಸಾಧ್ಯವಾಗಬಲ್ಲಷ್ಟು ದಟ್ಟವಾದ ಕತ್ತಲು) ಎಂದು ವರ್ಣಿಸಿದ್ದಾನೆ. ಇದನ್ನು ಬೇಂದ್ರೆ 'ಕಗ್ಗತ್ತಲು' ಎಂದು ಅನುವಾದಿಸಿದ್ದಾರೆ.

[3] ಶಿವನ ಶರೀರಕ್ಕೆ ಬಟ್ಟೆಯಾಗುವ, ಶಿವನ ಸೇವೆ ಮಾಡುವ ಪುಣ್ಯಕಾರ್ಯಗಳನ್ನು ಮೇಘನಿಂದ ಮಾಡಿಸಿದ ಯಕ್ಷ ಇಲ್ಲಿ ಮೇಘನನ್ನು ಅನೈತಿಕ ರಹಸ್ಯ ಸಂಬಂಧಗಳಲ್ಲಿ ತೊಡಗಿರುವ ಹೆಣ್ಣುಗಳಿಗೆ ಸಹಾಯ ಮಾಡುವ ಕೆಲಸಗಳಿಗೆ ಹಚ್ಚುತ್ತಿದ್ದಾನೆ

**ಮಿಂಚುಮಡದಿ[1] ಬಳಲಿರುವಳೇನೊ! ಮಲಗಲ್ಲಿ ಬೆಳ್ಳಬೆಳಗೆ ॥**
**ಮುಂದೆ ದೂಡುವುದು ನಿನ್ನನುದಯದಲಿ ನಮ್ಮ ನಿಮ್ಮ ನಂಟೇ**
**ಗೆಳೆಯನಾಗಿ ಕೈಕೊಂಡ ಕೆಲಸವನು ನಡುವೆ ಬಿಡುವರುಂಟೇ ॥**

ಹೇ ರಸಿಕ ಮಾಡಾ, ನಿನ್ನ ಮಿಂಚು ಮಡದಿ ಏಳನೆಯ ಉಪ್ಪರಿಗೆಯ (ಮಾಡದ) ಪಾರಿವಾಳಗಳು ಮಲಗುವ ಮಾಡಿನಲ್ಲಿ ನಿನಗಾಗಿ ಕಾದು ಬಳಲಿರುವಳೇನೋ. ಅಲ್ಲಿ ಬೆಳಗಾಗುವ ತನಕ ಸುಖವಾಗಿ ಮಲಗಿ ಶೃಂಗಾರವನ್ನು ಸವಿ. ಅನಂತರ ಉದಯದಲ್ಲಿ ನಮ್ಮ ನಿಮ್ಮ ನಂಟೇ ನಿನ್ನನ್ನು ಮುಂದಕ್ಕೆ ಹೊರಡುವಂತೆ ಮಾಡುವುದು. ಗೆಳೆಯನಾಗಿ ಕೈಕೊಂಡ ಕೆಲಸವನ್ನು ಯಾರಾದರೂ ನಡುವೆ ಬಿಡುವರುಂಟೇ?

39

**ಒಂಟಿಯಾಗಿ ಇರುಳುದ್ದ ಕಳೆದ ಸತಿಗಾಗಿ ರವಿಯು ಬಹನು**
**ಸಾವಿರಾರು ಕರ ಚಾಚಿ ಕಮಲೆಯರ ಕಣ್ಣನೊರೆಸಲಿಹನು ॥[2]**
**ತನ್ನ ಹೆಂಡಿರನು ತಾನೆ ತವಿಸದಿನ್ನಾರು ಶಮಿಸಲಹುದು**
**ಅಡ್ಡ ನೀನು ಇರಬೇಡ ರವಿಗೆ; ಅವ ಕೆಂಡವಾಗಬಹುದು ॥**

ಒಂಟಿಯಾಗಿ ದೀರ್ಘ ಇರುಳನ್ನೆಲ್ಲ ಕಳೆದ ಸತಿಗಾಗಿ ರವಿ ಬರುತ್ತಾನೆ. ತನ್ನ ಸಾವಿರಾರು ಕಿರಣ ಕರಣಗಳನ್ನು ಚಾಚಿ ಕಮಲೆಯರ ಕಣ್ಣನ್ನು ಒರೆಸುತ್ತಾನೆ. ತನ್ನ ಹೆಂಡಿರನ್ನು ತಾನೇ ಶಾಂತಗೊಳಿಸದೆ ಇನ್ಯಾರು ಸಮಾಧಾನಗೊಳಿಸಬಹುದು? ಹೀಗಾಗಿ ನೀನು ಸೂರ್ಯನಿಗೆ ಅಡ್ಡ ಇರಬೇಡ. ಅವನು ಕೆಂಡವಾಗಬಹುದು.

---

[1] ಮೂಲ ಸಂಸ್ಕೃತದಲ್ಲಿ ಕಾಳಿದಾಸ ವಿದ್ಯುತ್ ಕಳತ್ರ ಎಂದು ಪ್ರಯೋಗಿಸಿದ್ದು ಅದನ್ನು ಬೇಂದ್ರೆ 'ಮಿಂಚು ಮಡದಿ' ಎಂದು ಅನುವಾದಿಸಿದ್ದಾರೆ. ಹೆಂಡತಿಯಿಂದ ಅಗಲಿರುವ ಯಕ್ಷನು ಪ್ರಕೃತಿಯ ಪ್ರತಿಯೊಂದು ಅಂಶದಲ್ಲೂ ಗಂಡ ಹೆಂಡಿರ ಸಂಬಂಧವನ್ನೇ ಕಾಣುತ್ತಿದ್ದಾನೆ.

[2] ಸೂರ್ಯ ಮತ್ತು ಕಮಲದ ಹೂವು ಗಂಡ ಹೆಂಡಿರು ಎಂಬ ಕವಿ ಕಲ್ಪನೆ ಜನಜನಿತವಾದುದು. ಈ ಕಲ್ಪನೆಯನ್ನು ಆಧರಿಸಿ ಕವಿಯು "ಮುಂಜಾನೆ ಕಮಲದ ಹೂವಿನ ಮೇಲೆ ಮೂಡುವ ಇಬ್ಬನಿಯ ಹನಿಗಳು ಕಮಲೆ ಸುರಿಸುವ ಕಂಬನಿಯಾಗಿದೆ. ಇಡೀ ರಾತ್ರಿ ಗಂಡನಿಂದ ಅಗಲಿದ್ದ ಕಮಲವು ಕಣ್ಣೀರಿಡುತ್ತದೆ. ಮುಂಜಾನೆಯ ಸೂರ್ಯ ಕಿರಣಗಳೊಂದಿಗೆ ಇಬ್ಬನಿ ಕರಗುತ್ತದೆ. ಇದು ಸೂರ್ಯನು ತನ್ನ ಮಡದಿಯ (ಕಮಲದ ಹೂವಿನ) ಕಣ್ಣೀರನ್ನು ಒರೆಸುವ ಕ್ರಿಯೆಯಾಗಿದೆ" ಎನ್ನುತ್ತಾನೆ.

ಸಂಜೆ ಸೂರ್ಯ ಪಶ್ಚಿಮದಲ್ಲಿ ನಿರ್ಗಮಿಸಿದರೆ ತಾವರೆ ಏಕೆ ಅಳಬೇಕು? ಪ್ರಾಯಶಃ ಇವನು ನನ್ನನ್ನು ಬಿಟ್ಟು ಬೇರೆ ಮತ್ತೊಂದು ಹೆಣ್ಣಿನ ಸಂಗ ಮಾಡಲು ಹೋಗುತ್ತಿದ್ದಾನೆ ಎಂಬ ಅನುಮಾನ, ಕೋಪ ಅಥವಾ ಅಸೂಯೆ ಈ ಕಂಬನಿಗೆ ಕಾರಣವಾಗಿರಬಹುದು. ಕಮಲೆಯ ಈ ದುಗುಡ ಸೂರ್ಯನ ಆಗಮನದೊಂದಿಗೆ ಶಮನವಾಗಿಬಿಡುತ್ತದೆ. ಮೂಲದಲ್ಲಿರುವ ಈ ಭಾವವನ್ನು ಬೇಂದ್ರೆ ತಮ್ಮ ಅನುವಾದದಲ್ಲಿ ಬಳಸಿಕೊಂಡಿಲ್ಲ. ಮೂಲದಲ್ಲಿರುವ 'ಅಭ್ಯಸೂಯಾ' (ಅಸೂಯಾಗ್ರಸ್ತಳಾದ) ಎಂಬ ಪದವನ್ನು ಬೇಂದ್ರೆ ಅನುವಾದಿಸಿಲ್ಲ.

40

**ಹೆಸರಿನಂತೆ ಗಂಭೀರೆ[1] ಧೀರೆ ತಿಳಿನೀರೆ[2] ಜಲದೊಳವಳ**
**ಸೇರಬಲ್ಲೆ ನೆರಳಾದರೇನು? ಸರಿ, ನೀನು ನೀರನಿವಳ ॥[3]**
**ಅವಳು ನೋಡುವಳು ಚಪಳ ಮೀನ ಚಳಕುಮುದ ನೇತ್ರೆಯಾಗಿ[4]**
**ತಿರುಗಿ ನೋಡು ಇಹಳವಳು ನಿನ್ನ ಅನುರೂಪ ಕ್ಷೇತ್ರವಾಗಿ ॥**

ಮೇಘವೇ, ಹೆಸರಿನಂತೆ ಗಂಭೀರ ಧೀರೆ, ತಿಳಿನೀರ ನೀರೆ ಗಂಭೀರಾ ನದಿ. ನೀನು ನೆರಳಾದರೇನು? ಜಲದ ರಾಸಲೀಲೆಯಲ್ಲಿ ಅವಳನ್ನು ಸೇರಬಲ್ಲೆ. ನೀನು ಅವಳ ನಲ್ಲನಾಗಿರುವೆ. ಅವಳು ಚಪಲ ಮೀನಿನ ಚಂಚಲವಾದ ಕುಮುದ ನೇತ್ರೆಯಾಗಿ ನಿನ್ನನ್ನು ನೋಡುವಳು. ಹೇ ವಿಲಾಸಿಯೇ, ತಿರುಗಿ ಒಮ್ಮೆ ನೋಡು. ಅವಳು ನಿನ್ನ ಅನುರೂಪ ಕ್ಷೇತ್ರವಾಗಿದ್ದಾಳೆ.

41

**ಕೈಯ ಚಾಚಿ ನಡೆವಂತೆ ನಾಚಿ ನೀರ್ಬೆತ್ತ ಬಾಗಿ ಎಳೆದು[5]**
**ಹಿಡಿದರೇನವಳ ಮುಗಿಲ ಬಣ್ಣದಾ ಮಂಜು ಸೀರೆ ಸೆಳೆದು ॥**

---

[1] ಗಂಭೀರೆ = ವಿಂಧ್ಯೆಯಲ್ಲಿ ಹುಟ್ಟುವ ಒಂದು ನದಿ; ತನ್ನ ಪ್ರೇಮಭಾವವನ್ನು ಸುಲಭವಾಗಿ ವ್ಯಕ್ತಪಡಿಸದೆ ಒಳಗೇ ಹುದುಗಿಸಿಕೊಳ್ಳುವ ಹೆಣ್ಣು. ಆದ್ದರಿಂದಲೇ ಅವಳು ಧೀರೆ

[2] ತಿಳಿನೀರೆ = ಪರಿಶುದ್ಧಳು, ನಿಷ್ಕಲ್ಮಶ ಹೃದಯದವಳು.

[3] ಕವಿ ಇಲ್ಲಿ 'ನೆರಳು' ಎಂಬ ಪದವನ್ನು ಬಳಸಲು ಕಾರಣವಿದೆ. "ನೀನು ಇಂತಹ ಹೆಣ್ಣಿನೊಂದಿಗೆ ಸುಖಿಸುತ್ತ ಕಾಲ ಕಳೆಯಬೇಡ, ವಿಳಂಬವಾಗಬಹುದು. ನಿನ್ನ ನೆರಳನ್ನಷ್ಟೇ ಅವಳ ಎದೆಯಲ್ಲಿ ಮೂಡಿಸು" ಎಂದು ಮೋಡಕ್ಕೆ ಸೂಚಿಸುತ್ತಿದ್ದಾನೆ.

[4] ಗಂಭೀರಾ ನದಿಯಲ್ಲಿ ಮೀನುಗಳು ಅರೆಕ್ಷಣವೂ ನಿಲ್ಲದಂತೆ ಚಂಚಲಮಯವಾಗಿ ಈಜಾಡುತ್ತಿರುತ್ತವೆ. ಮೀನಿನ ಈ ಚಂಚಲ ಚಲನೆಯನ್ನು ಕವಿ ನದಿಯ ಕಣ್ಣೋಟದ ಚಂಚಲತೆಗೆ ಹೋಲಿಸಿದ್ದಾನೆ. ಅವಳು ಎಷ್ಟೇ ಧೀರೆಯಾದರೂ, ಗಂಭೀರೆಯಾದರೂ, ತನ್ನ ಪ್ರೇಮಭಾವವನ್ನು ತನ್ನೊಳಗೇ ಹುದುಗಿಸಿಕೊಳ್ಳಲು ಪ್ರಯತ್ನಿಸಿದರೂ ಮೋಡದ ಆಗಮನವನ್ನು ಕಂಡು ಅವಳ ಹೃದಯದಲ್ಲಿ ಸಂಚಲನವಾಗುತ್ತದೆ. ಆ ಸಂಚಲನ ಅವಳ ಚಪಲ ಚಂಚಲ ಕಣ್ಣುಗಳಲ್ಲಿ ಗೋಚರಿಸುತ್ತದೆ.

[5] ಗಂಭೀರೆಯೊಂದಿಗೆ ಸುಖಿಸುತ್ತ ಕಾಲಹರಣ ಮಾಡಬೇಡ ಎಂಬ ಯಕ್ಷನ ಸೂಚನೆಯನ್ನು ಮೇಘ ನಿರ್ಲಕ್ಷಿಸಿದ್ದಾನೆ. ಅವನು ಅವಳೊಡನೆ ಸಮಾಗಮಿಸಿ, ಅವಳನ್ನು ತೃಪ್ತಿಯಾಗುವಷ್ಟು ಹೀರಿ ಮುಂದಕ್ಕೆ ಹೋಗುತ್ತಿದ್ದಾನೆ. ಹೋಗುವಾಗ ಜೊತೆಗೆ ಅವಳು ಉಟ್ಟಿದ್ದ ಸೀರೆಯನ್ನೂ ತನ್ನೊಂದಿಗೆ ಕೊಂಡೊಯ್ಯುತ್ತಿದ್ದಾನೆ. ನದಿಯ ದಡದಲ್ಲಿ ಉದ್ದನೆಯ ಬಿದಿರು ಬೆಳೆದಿವೆ. ನದಿಯ ನೀರು ಅವಳ ನೀಲಿ ಬಣ್ಣದ ಸೀರೆಯಂತೆಯೂ, ದಡದ ಉದ್ದನೆಯ ಜೊಂಡು ಹುಲ್ಲು (ನೀರ್ಬೆತ್ತ) ಅವಳ ಉದ್ದನೆಯ ಬೆರಳುಗಳಂತೆಯೂ ಕವಿಯ ಕಣ್ಣಿಗೆ ಕಾಣಿಸುತ್ತಿವೆ. ಮೋಡ ಅವಳ ನೀರನ್ನೆಲ್ಲ ಹೀರಿಕೊಂಡು (ನೀರಿನ ಬಣ್ಣದ ಸೀರೆಯನ್ನು ಸೆಳೆದುಕೊಂಡು) ಮುಂದಕ್ಕೆ ಹೋದುದರಿಂದ ಅವಳು ನಾಚಿ ತನ್ನ ಬೆರಳಿನಿಂದ (ಜೊಂಡು ಹುಲ್ಲಿನಿಂದ) ಮೈಯಿಂದ ಜಾರುತ್ತಿರುವ ಸೀರೆಯನ್ನು ಹಿಡಿದಿಟ್ಟುಕೊಳ್ಳಲು ಪ್ರಯತ್ನಿಸುತ್ತಿದ್ದಾಳೆ.

**ಒಯ್ಯೋ ನಿನ್ನ ಜೊತೆಗಿರಲಿ, ಮೇಘವೇ, ಪಯಣ ಬೆಳೆಸುವಾಗ**
**ಉಂಡು ಒಮ್ಮೆ ಬಿಡಬಹುದದಾರು ಬರಿ ಬಚ್ಚ ಚೆಲುವು ಭೋಗ ॥**[1]

ಹೇ ವಿನೋದ ಸ್ವಭಾವದವನೇ, ಮುಗಿಲ ಬಣ್ಣದ ಆ ನದಿಯ ಮೈಮೇಲಿನ ಮಂಜು ಸೀರೆ ಎಳೆದು ಹಿಡಿದರೇನು? ಅವಳು ಕೈಯ ಚಾಚಿ ತನ್ನ ನೀರ್ಬೆತ್ತದಿಂದ ತಡೆದು ನಾಚುವಳು! ಪಯಣ ಬೆಳೆಸುವಾಗ ನಿನ್ನ ಜೊತೆಗಿರಲಿ, ಅವಳನ್ನು (ಅವಳ ಸೀರೆಯನ್ನು) ಒಯ್ಯೋ. ಉಂಡು ಒಮ್ಮೆ ಬಿಡಬಹುದಾದವರು ಯಾರು? ಬರಿಚೆಲುವಿನ ಭೋಗ ಕೆಟ್ಟುದು.

42

**ನಿನ್ನ ಉಸಿರ ಹನಿ ಸೋಕಿ, ನೆಲದ ನರುಗಂಪು ಹೊಮ್ಮಿ ತಾಗಿ**
**ಬಂದ ಗಾಳಿ ಕುಡಿದಾನೆ ತಾನೆ ಹರಿ ಮೂಗೆ ಸೊಂಡಿಲಾಗಿ ॥**
**ಕಾಡ ಅತ್ತಿ ಹಣ್ಗೊಳಿಸುವಂಥ ತಂಗಾಳಿ ಇದಿರು ಬಂದು**
**ದೇವಗಿರಿಯ**[2] **ಸೇರಿಸುವದಣ್ಣ 'ಬಿಜ ಮಾಡಿ ತಾವು' ಎಂದು ॥**[3]

ಅಣ್ಣ, ನಿನ್ನ ಉಸಿರ ಹನಿ ಸೋಕಿ ನೆಲದ ನರುಗಂಪು ಹೊಮ್ಮಿ ಆನೆಗೆ ತಾಗುತ್ತದೆ. ಆಗ ಆನೆಯು ತನ್ನ ಸೊಂಡಿಲ ಮೂಗಿನಿಂದ ಆ ಸವಿಗಂಪನ್ನು ಕುಡಿಯುತ್ತದೆ. ಕಾಡ ಅತ್ತಿಯನ್ನು ಹಣ್ಣಾಗಿ ಮಾಗಿಸುವಂಥ ತಂಗಾಳಿ ಎದುರು ಬಂದು ನಿನ್ನನ್ನು ಸ್ವಾಗತಿಸುತ್ತದೆ. ಅದು 'ದಯ ಮಾಡಿ ತಾವು' ಎನ್ನುತ್ತ ನಿನ್ನನ್ನು ದೇವಗಿರಿಗೆ ಸೇರಿಸುತ್ತದೆ.

43

**ಈ ಗಿರಿಯ ಜೀವ, ಆ ಸ್ಕಂದ ದೇವ,**[4] **ಅಭಿಷೇಕ ಮಾಡು ಬಾಗಿ**

---

[1] ಅವಳನ್ನು ಒಮ್ಮೆ ಅನುಭವಿಸಿ ಬಿಟ್ಟುಬಿಟ್ಟರೆ ಹೇಗೆ? ರಸಿಕನಾದವನು ಆ ಸುಖಾನುಭವದ ನೆನಪನ್ನೂ ತನ್ನೊಂದಿಗೆ ಒಯ್ಯಬೇಕಾಗುತ್ತದೆ.

[2] ಮಾಳ್ವದಲ್ಲಿ, ಚಂಬಲ್ ಕಣಿವೆಯ ದಕ್ಷಿಣ ಭಾಗದಲ್ಲಿರುವ ದೇವಗಢವೇ ಅಂದಿನ ದೇವಗಿರಿ ಇದ್ದಿರಬಹುದು. ದೇವಗಢ ಝಾನ್ಸಿಯಿಂದ 60 ಮೈಲಿ ದೂರದಲ್ಲಿದೆ. ಇಲ್ಲಿ ಕಾರ್ತಿಕೇಯನ ಬೆಟ್ಟವಿದೆ.

[3] ಮೋಡವು ಗಂಭೀರೆಯೊಂದಿಗೆ ಕಾಮಸುಖದಲ್ಲಿ ಮುಳುಗೆದ್ದ ಮೇಲೆ ಇದೀಗ ಯಕ್ಷ ಅವನನ್ನು ಪುಣ್ಯಕ್ಷೇತ್ರವೊಂದರ ಕಡೆಗೆ ನಿರ್ದೇಶಿಸುತ್ತಿದ್ದಾನೆ.

[4] ಸ್ಕಂದದೇವ: ಇದು ಕುಮಾರ ಸಂಭವದಲ್ಲಿ ಬರುವ ಕತೆ. ಶಿವನಿಗೆ ಜನಿಸುವ ಮಗುವಿನಿಂದಲೇ ಸಾಯುವ ವರ ಪಡೆದಿದ್ದ ತಾರಕಾಸುರ ದೇವತೆಗಳ ಮೇಲೆ ಒಂದೇ ಸಮನೆ ದಾಳಿ ಮಾಡುತ್ತಿದ್ದ. ಇವನ ಕಿರುಕುಳದಿಂದ ತಪ್ಪಿಸಿಕೊಳ್ಳಲು ದೇವತೆಗಳು ಪ್ರಯಾಸದಿಂದ ತಪಸ್ವಿಯೂ, ಬ್ರಹ್ಮಚಾರಿಯೂ ಆಗಿದ್ದ ಶಿವನಿಗೆ ಪಾರ್ವತಿಯೊಂದಿಗೆ ವಿವಾಹ ಮಾಡಿಸಿದರು. ಆದರೆ ಬಹುಕಾಲವಾದರೂ ತಪಸ್ವಿಯಾದ ಶಿವನು ಪಾರ್ವತಿಯನ್ನು ಸೇರಲೇ ಇಲ್ಲ. ಕೊನೆಗೆ ಕಾಮದೇವನ ನೆರವಿನಿಂದ ಶಿವನಿಗೆ ಪಾರ್ವತಿಯಲ್ಲಿ ಮೋಹ ಉಂಟಾಗುತ್ತದೆ. ಆದರೆ ಶಿವನ ಪ್ರಖರ ತೇಜಸ್ಸಿನ ವೀರ್ಯವನ್ನು ಸ್ವೀಕರಿಸಲು ಪಾರ್ವತಿ ನಿರಾಕರಿಸುತ್ತಾಳೆ. ಆಗ ಶಿವನಿಗೆ ಸ್ಖಲನವಾಗುತ್ತದೆ (ಶಿವನ ಸ್ಖಲಿತ ವೀರ್ಯದಿಂದ ಹುಟ್ಟಿದ ಕಾರಣ ಷಣ್ಮುಖನಿಗೆ ಸ್ಕಂದದೇವ ಎಂಬ ಹೆಸರು ಬಂದಿದೆ). ಅಗ್ನಿ ಆ ವೀರ್ಯವನ್ನು ಹೊತ್ತು ತಂದು ಗಂಗೆಗೆ ಹಾಕುತ್ತಾನೆ. ಅಲ್ಲಿ ಶಿಶು ಜನನವಾಗುತ್ತದೆ. ಅಗ್ನಿ ದೇವತೆಗಳಲ್ಲೇ ಅತ್ಯಂತ ಪರಿಶುದ್ಧನಾದ

**ಹೂ ಮೋಡದಿಂದ ಹೂಮಳೆಯ[1] ಸುರಿಸು ನೀ ಬಾನಗಂಗೆಯಾಗಿ ॥**
**ಸುರರಾಜ್ಯ ಸೈನ್ಯ ರಕ್ಷಣೆಗೆ[2] ಬಂದ ಶಿವವೀರ್ಯದೊಂದು ಮೂರ್ತಿ**
**ಅವ ಮಿಗಿಲು ಹಗಲಿಗೂ, ಉರಿಯ ಕಂದ, ಕಿರುಕುಳವೆ ಅಂಥ ಕೀರ್ತಿ ॥**

ಈ ಗಿರಿಯ ಜೀವ ಆ ಸ್ಕಂದ ದೇವ, ಷಣ್ಮುಖ. ಅವನ ನಿವಾಸ ಈ ದೇವಗಿರಿ. ಅವನಿಗೆ ಬಾಗಿ ಹೂ ಮೋಡದಿಂದ ಮಳೆಯನ್ನು ಸುರಿಸುತ್ತ ನೀನು ಬಾನಗಂಗೆಯಾಗಿ ಅಭಿಷೇಕ ಮಾಡು. ಅವನು ದೇವತೆಗಳ ರಾಜ್ಯದ ಸೇನೆಯ ರಕ್ಷಣೆಗಾಗಿ ಬಂದ ಶಿವವೀರ್ಯದ ಮೂರ್ತಿ. ಅವನು ಹಗಲಿಗೂ ಮಿಗಿಲ ಪ್ರಕಾಶದ, ಉರಿಯ ಕಂದ. ಅಲ್ಪವೇ ಅಂತಹ ಕೀರ್ತಿ?

44

**ಉದುರಿದ್ದ ನವಿಲಗರಿ ಮುತ್ತಿ ಎತ್ತಿ ಕಣ್ಣೊತ್ತಿ ಶಿವೆಯು ಕಿವಿಗೆ**
**ನೈದಿಲೆಯ ಬಳಿಗೆ ಇರಿಸುವಳು ಅವಳು ಮಗನೊಂದು ಮುದ್ದು ಸವಿಗೆ ॥**

---

ಕಾರಣ ಶಿವನ ವೀರ್ಯವನ್ನು ನಿರ್ವಹಿಸುವ ಕೆಲಸವನ್ನು ಅವನಿಗೆ ವಹಿಸಲಾಗುತ್ತದೆ. ಆರು ಮಂದಿ ಕೃತ್ತಿಕಾ ದೇವತೆಗಳು (ಶಿವಾ, ಸಂಭೂತಿ, ಪ್ರೀತಿ, ಸನ್ನತಿ, ಅನಸೂಯಾ, ಕ್ಷಮಾ) ಶಿವನ ಆ ಶಿಶುವನ್ನು ತೆಗೆದುಕೊಂಡು ಪೋಷಿಸುತ್ತಾರೆ (ಆದ್ದರಿಂದಲೇ ಅವನಿಗೆ ಕಾರ್ತಿಕೇಯನೆಂಬ ಹೆಸರು ಬಂದಿದೆ). ಶಿವನ ವೀರ್ಯವು ಶರ ಎಂಬ ಜಾತಿಯ ಜೊಂಡು ಹುಲ್ಲಿನ ಮೇಲೆ ಬಿದ್ದು ಅದು ಆಮೇಲೆ ಶಿಶುವಾಯಿತು. ಆ ಶಿಶುವನ್ನು ಕೃತ್ತಿಕೆಯರು ಪೋಷಿಸಿದರು ಎಂದು ಕುಮಾರ ಸಂಭವದಲ್ಲಿದೆ. ಆದ್ದರಿಂದಲೇ ಷಣ್ಮುಖನಿಗೆ ಶರವಣ (>ಶರವನ) ಭವ' ಎಂಬ ಹೆಸರು ಬಂದಿದೆ. ಆರು ಕೃತ್ತಿಕೆಯರು ಶಿವನ ವೀರ್ಯವನ್ನು ಆರು ಭಾಗಗಳಾಗಿಸಿ ಧರಿಸಿ ಆರು ಶಿಶುಗಳಿಗೆ ಜನ್ಮ ನೀಡಿದರು. ತರುವಾಯ ಆ ಆರೂ ಶಿಶುಗಳು ಒಂದೇ ಶಿಶುವಿನಲ್ಲಿ ಐಕ್ಯವಾಗಿ ಆರು ತಲೆಗಳು ಮಾತ್ರ ಹಾಗೆಯೇ ಉಳಿದುಕೊಂಡವು. ಆರು ಮಂದಿ ತಾಯಂದಿರನ್ನು ಸಮಾನವಾಗಿ ತೃಪ್ತಿಪಡಿಸುವ ಸಲುವಾಗಿ ಅವನು ಆರು ಮುಖಗಳಿಂದ ಅವರ ಎದೆಹಾಲು ಕುಡಿದ ಎಂಬ ಆವೃತ್ತಿಯೂ ಕೆಲವು ಪುರಾಣಗಳಲ್ಲಿದೆ. ಆದ್ದರಿಂದ ಅವನಿಗೆ ಷಣ್ಮುಖ ಎಂಬ ಹೆಸರು ಬಂದಿತು. ಗಂಡು ಹೆಣ್ಣುಗಳ ಸಂಯೋಗವಿಲ್ಲದೆಯೇ ಜನಿಸುವ ಇಂತಹ ಕಥನಗಳು ಗ್ರೀಕ್ ಪುರಾಣಗಳಲ್ಲೂ ಕಂಡು ಬರುತ್ತದೆ. (ಉದಾ. ಪಲ್ಲಾಸ್ ಜ್ಯೂಪಿಟರ್ನ ಹುಬ್ಬಿನಿಂದ ಜನಿಸಿದ).

[1] ಮೋಡ ಯಾವ ರೂಪವನ್ನಾದರೂ ತೆಗೆದುಕೊಳ್ಳಬಲ್ಲುದೆಂದ ಮೇಲೆ ಯಾವ ಮಳೆಯನ್ನಾದರೂ, ಹೂಮಳೆಯನ್ನಾದರೂ, ಸುರಿಸಬಲ್ಲುದು ಎಂಬ ತೀರ್ಮಾನ ಕವಿಯದು.

[2] ಕಾರ್ತಿಕೇಯ ಯುದ್ಧ ದೇವತೆ. ದೇವತೆಗಳ ಸೈನ್ಯಾಧಿಪತಿ. ನವಿಲಿನ ಮೇಲೆ ಕುಳಿತು ಒಂದು ಕೈಯಲ್ಲಿ ಬಿಲ್ಲನ್ನೂ, ಮತ್ತೊಂದು ಕೈಲಿ ಬಾಣವನ್ನೂ ಹಿಡಿದಿರುತ್ತಾನೆ. ಇವನಿಗೆ ಸೇನಾಪತಿ, ಸಿದ್ಧಸೇನ, ಮಹಾಸೇನ ಮುಂತಾದ ಹೆಸರುಗಳಿವೆ. ಇವನ ಹೆಂಡತಿಯ ಹೆಸರೂ ಸಹ ದೇವಸೇನಾ. ಇವನು ಸದಾಕಾಲ ಯುವಕನಾಗಿಯೇ ಇರುವ ಕಾರಣ ಇವನಿಗೆ 'ಕುಮಾರ' ಎಂಬ ಹೆಸರಿದೆ. ಕ್ರೌಂಚ ಪರ್ವತವನ್ನು ಎರಡು ಹೋಳಾಗಿಸಿದ್ದರಿಂದ ಇವನಿಗೆ ಕ್ರೌಂಚಧಾರಣ ಎಂಬ ಹೆಸರಿದೆ. ದೇವಲೋಕದಲ್ಲಿ ಯಾರಿಗೆ ಹೆಚ್ಚಿನ ಅಧಿಕಾರವಿದೆ ಎಂಬ ವಿಷಯದಲ್ಲಿ ಇಂದ್ರ ಮತ್ತು ಸುಬ್ರಹ್ಮಣ್ಯರ ನಡುವೆ ವಿವಾದ ಹುಟ್ಟಿದಾಗ ಇಬ್ಬರೂ ತಮ್ಮ ಸತ್ವ ಪರೀಕ್ಷೆಗೆ ಸಿದ್ಧರಾಗುತ್ತಾರೆ. ಕ್ರೌಂಚ ಪರ್ವತವನ್ನು ಯಾರು ಮೊದಲು ಪ್ರದಕ್ಷಿಣೆ ಹಾಕುವರೋ ಅವರಿಗೇ ಹೆಚ್ಚಿನ ಅಧಿಕಾರವೆಂದು ತೀರ್ಮಾನವಾಗುತ್ತದೆ. ಈ ಪಂಥದಲ್ಲಿ ಕ್ರೌಂಚ ಇಂದ್ರನ ಪಕ್ಷಪಾತಿಯಂತೆ ವರ್ತಿಸಿದ್ದರಿಂದ ಕೋಪಗೊಂಡ ಸ್ಕಂದ ಕ್ರೌಂಚವನ್ನು ಪುಡಿ ಪುಡಿ ಮಾಡುತ್ತಾನೆ.

**ಶಿವಮೌಳಿ ಚಂದ್ರಕಳೆಗಿಂತ ಬೆಳ್ಳಗುಡಿಗಣ್ಣ[1] ನವಿಲ ಕುಣಿಸು[2]**
**ಅಗೊ ನಿನ್ನ ಮೊಳಗು, ಆ ಗುಡ್ಡದೊಳಗು, ಸೊಲ್ಲಾಗುವಂತೆ ತಣಿಸು ॥[3]**

ಪಾರ್ವತಿಯು ತನ್ನ ಮಗ ಸ್ಕಂದನು ಏರಿಬಂದ ನವಿಲಿನ ಗರಿ ಉದುರಿರುವುದನ್ನು ನೋಡುತ್ತಾಳೆ. ಅದನ್ನು ಎತ್ತಿ ಮುತ್ತಿಟ್ಟು ಕಣ್ಗೊತ್ತಿಕೊಳ್ಳುತ್ತಾಳೆ. ತನ್ನ ಮಗನ ಮೇಲಿನ ಪ್ರೀತಿಯ ಮುದ್ದು ಸವಿಗೆ ತಾನು ಮುಡಿದಿದ್ದ ನೈದಿಲೆಯ ಪಕ್ಕ ಕಿವಿಯ ಬಳಿ ಸಿಕ್ಕಿಸಿಕೊಳ್ಳುತ್ತಾಳೆ. ಹೇ ಸವಿ ಭಾವದ ಗೆಳೆಯನೇ, ಶಿವನ ನೆತ್ತಿಯ ಮೇಲಿನ ಚಂದ್ರಕಳೆಗಿಂತಲೂ ಬೆಳ್ಳಗೆ ಕಾಂತಿಯುಕ್ತವಾಗಿ ಉಡಿಗಣ್ಣ (ಸೊಂಟದಲ್ಲಿ ಕಣ್ಣುಳ್ಳವನಾದ) ನವಿಲನ್ನು ಕುಣಿಸು. ಆ ದೇವಗಿರಿಯ ಗುಡ್ಡದಲ್ಲಿ ನಿನ್ನ ಮೊಳಗು ನಾದಮಯವಾಗುವಂತೆ ತಣಿಸು!

45

**ಹರಶರಗಳಲ್ಲಿ ಹುಟ್ಟಿದ್ದ[4] ದೇವನಾ ಸೇವೆಯಾಗೆ ಲೀಲೆ**
**ವರ ಸಿದ್ಧದ್ವಂದ್ವಗಳು ವೀಣೆಗೂಡಿ, ಮಳೆ ಹಾದಿ ಬಿಟ್ಟ ಮೇಲೆ ॥**
**ಗೋಯಾಗದೊಂದು[5] ಅನುರಾಗದಿಂದ ಬರುವಲ್ಲಿ ಬಾರೊ ಸುರಿಯೆ**
**ಹಾತೊರೆವ ಚರ್ಮವತಿ[6] ರಂತಿದೇವನಾ[7] ಕೀರ್ತಿಯಂತೆ ಮೆರೆಯೆ ॥**

ನಿನ್ನ ಶ್ರೇಷ್ಠ ಸಿದ್ಧ ದ್ವಂದ್ವಗಳು ವೀಣೆಯಂತೆ ಮಿಡಿದು, ಆ ನಾದಲೀಲೆಯು ಹರಪುತ್ರನ ಸೇವೆ ಮಾಡಿದೆ. ನೀನು ಆ ಮಳೆ ಹಾದಿ ಬಿಟ್ಟು ಮುಂದುವರೆದು ಪುರುವಂಶದ ರಂತಿದೇವನ ಗೋವುಗಳ ಯಾಗ ನೆಲೆಗೆ ಬಾ. ಅವನ ಕೀರ್ತಿಯಂತೆ ಮೆರೆಯುವ ಚರ್ಮವತಿ ನದಿಯ ಮೇಲೆ ಅನುರಾಗದಿಂದ ಮಳೆ ಸುರಿಸು.

---

[1] ಕಾಳಿದಾಸ ನವಿಲನ್ನು 'ಜ್ಯೋತಿರ್ಲೇಖಾ' (ಕಾಂತಿಯುಕ್ತ ರೇಖೆಗಳುಳ್ಳದ್ದು) ಎಂದು ವರ್ಣಿಸಿದ್ದಾನೆ. ಈ ಪದವನ್ನು ಬೇಂದ್ರೆ 'ಉಡಿಗಣ್ಣ' (ಸೊಂಟದಲ್ಲಿ ಕಣ್ಣುಳ್ಳವನು) ಎಂದು ಅನುವಾದಿಸಿದ್ದಾರೆ.

[2] ಮೋಡಗಳ ಆಗಮನದೊಂದಿಗೆ ನವಿಲುಗಳು ನರ್ತಿಸುತ್ತವೆ ಎಂಬುದನ್ನು ಈ ಹಿಂದೆ ವಿವರಿಸಲಾಗಿದೆ.

[3] ಸ್ಕಂದ ವಾಸಿಸುವ ದೇವಗಿರಿಯ ಬೆಟ್ಟದಲ್ಲಿ ಮೋಡದ ಗುಡುಗಿನ ಗರ್ಜನೆ ಮಾರ್ದನಿಸಲಿ. ಆ ಮಾರ್ದನಿಗೆ ಬೆಟ್ಟದ ನವಿಲುಗಳು (ಸ್ಕಂದನ ವಾಹನ) ಕುಣಿಯುವಂತಾಗಲಿ.

[4] ಹರನ ವೀರ್ಯ ಮತ್ತು ಶರವೆಂಬ ಜಾತಿಯ ಜೊಂಡು ಹುಲ್ಲು – ಇವುಗಳಿಗೆ ಜನಿಸಿದ್ದರಿಂದ ಅವನು ಹರಶರ, ಶರವನಭವ.

[5] ರಾಜಾ ರಂತಿದೇವನು ಗೋಮೇಧ ಯಜ್ಞ ನಡೆಸಿ ಸಾವಿರಾರು ಹಸುಗಳನ್ನು ಕೊಲ್ಲುತ್ತಾನೆ. ಹಸುಗಳ ನೆತ್ತರು ನದಿಯಂತೆ ಹರಿದು ಅದೇ ಚರ್ಮವತಿ ನದಿಯಾಗುತ್ತದೆ.

[6] ಚರ್ಮಣ್ವತಿ > ಚರ್ಮವತಿ > ಚಂಬಲ್ ನದಿ

[7] ದಶಪುರದ ಅರಸನಾದ ರಂತಿದೇವ ಭರತಕುಲದ ಆರನೆಯ ದೊರೆ. ಸಂಕೃತಿಯ ಇಬ್ಬರು ಮಕ್ಕಳ ಪೈಕಿ ಎರಡನೆಯವನು. ಇವನು ತನ್ನ ದಾನ, ಧರ್ಮ, ಭಕ್ತಿ, ಯಜ್ಞ ಯಾಗಾದಿಗಳಿಗೆ ಪ್ರಸಿದ್ಧನು.

46

**ಕೃಷ್ಣ ವರ್ಣವನೆ ಕಳವು ಮಾಡಿದಾ ಮೋಡ[1] ನೀನು ತಗ್ಗಿ**
**ನದಿಯ ನೀರು ಕುಡಿವಾಗ ಕಾಣುವಿಯೊ, ಬಾನಿನಲ್ಲಿ ಹಿಗ್ಗಿ ॥**
**ನೋಡಲಿರುವ ಆ ದೇವಜಾತಿಗಳ ಕಣ್ಗೆ ಜಾಲವಾಗಿ**
**ಭೂಮಿತೊಟ್ಟ ಅಣಿಮುತ್ತು ಹಾರದಲಿ ಇಂದ್ರನೀಲವಾಗಿ ॥[2]**

ಹೇ ಕಪ್ಪುಬಣ್ಣವನ್ನೇ ಕಳವು ಮಾಡಿರುವ ಮೋಡವೇ, ನೀನು ತಗ್ಗಿ ನದಿಯ ನೀರು ಕುಡಿಯುವಾಗ, ದೇವತೆಗಳು ಬಾಗಿ ಹಿಗ್ಗಿ ನೋಡುತ್ತಾರೆ. ಅವರ ಕಣ್ಣಿಗೆ ನೀನು ಜಾಲವಾಗಿ, ಭೂಮಿಯು ತೊಟ್ಟ ಮನೋಹರ ಹಾರದಲ್ಲಿಯ ಇಂದ್ರನೀಲದಂತೆ ಕಾಣುವೆ.

47

**ಮುಂದೆ ದಶಪುರದ[3] ಹೆಣ್ಣಿ ಹುಬ್ಬು ಕರೆಯುವದು ಲೋಲವಾಗಿ**
**ಎವೆಗಳಾಟದಲಿ ನೋಟವೆಸೆಯುತಿರೆ ಕಪ್ಪುನೀಲವಾಗಿ ॥**
**ಯಾರ ಕಣ್ಣು ಹೋಲುವವು ಮೊಲ್ಲೆಯೊಡನಾಡಿ ತುಂಬಿಯನ್ನು**
**ಅವರ ಕಣ್ಣ ಕುತುಕಕ್ಕೆ ನೀಡು ನಿನ್ನಾತ್ಮ ಬಿಂಬವನ್ನು ॥[4]**

ಅನಂತರ ಮುಂದೆ ನಿನಗೆ ಕಾಣುವುದು ದಶಪುರ; ಅಲ್ಲಿಯ ರಸಿಕ ಹೆಣ್ಣಿನ ಹುಬ್ಬು ಚಂಚಲಮಯವಾಗಿ ನಿನ್ನನ್ನು ಕರೆಯುವುದು. ಆ ಸೊಬಗಿಯರು ಕಣ್ಣೆವೆಗಳ ಆಟದಲ್ಲಿ ಕಪ್ಪು ನೀಲವಾಗಿ ನೋಟವನ್ನು ಬೀರುವರು. ಆ ಕಣ್ಣುಗಳೋ ಮೊಲ್ಲೆ ಹೂವಿನ ಜೊತೆ ಆಡುವ ತುಂಬಿಯನ್ನು ಹೋಲುವವು. ಅವರ ಕಣ್ಣಿನ ಉತ್ಸಾಹಕ್ಕೆ ನಿನ್ನ ಆತ್ಮಬಿಂಬವನ್ನು (ನೀಲವರ್ಣವನ್ನು) ನೀಡು!

---

[1] ಕಪ್ಪು ಬಣ್ಣದವನೇ ಎಂಬ ಮಾತನ್ನು 'ಶ್ರೀಕೃಷ್ಣನ ಬಣ್ಣವನ್ನೇ ಕದ್ದವನೇ' ಎಂದು ಕಾವ್ಯಾತ್ಮಕವಾಗಿ ಹೇಳುವ ರೀತಿ.

[2] ಗಗನದಲ್ಲಿ ನಿಂತು ನೋಡುವ ದೇವತೆಗಳ ಕಣ್ಣಿಗೆ ಉದ್ದನಾಗಿ ಹರಿಯುವ ನದಿಯು ಭೂದೇವಿಯ ಕೊರಳ ಹಾರದಂತೆಯೂ, ನದಿಯ ನೀರನ್ನು ಹೀರಲು ಧರೆಗಿಳಿವ ನೀಲಿಮೋಡವು ಆ ಹಾರದ ಮಧ್ಯದಲ್ಲಿರುವ ಇಂದ್ರನೀಲಮಣಿಯಂತೆಯೂ ಕಾಣಿಸುತ್ತದೆ.

[3] ಹತ್ತು ಊರುಗಳನ್ನು ಒಳಗೊಂಡ ಒಂದು ಪ್ರಾಂತ್ಯ. ಈ ಹಿಂದೆ ವಿವರಿಸಿದಂತೆ ರಾಜಾ ರಂತಿದೇವನ ರಾಜಧಾನಿ. ಚಂಬಲ್ನ ಉತ್ತರ ಭಾಗದಲ್ಲಿ ಉಜ್ಜಯಿನಿಯಿಂದ ಥಾನೇಶ್ವರಕ್ಕೆ ಹೋಗುವ ಹಾದಿಯಲ್ಲಿದೆ. ಇಂದು ಅದಕ್ಕೆ ರಣತಂಬೋರ್ (ರಂತಿದೇವನ ಊರು) ಎಂಬ ಹೆಸರಿದೆ. ಮಹಾಭಾರತದಲ್ಲಿ, ನಾಸಿಕ್ ಶಾಸನಗಳಲ್ಲಿ ಮತ್ತು ಗುಪ್ತರ ಕಾಲದ ಶಾಸನಗಳಲ್ಲಿ ಇದರ ಹೆಸರು ಉಲ್ಲೇಖಗೊಂಡಿದ್ದು. ಆ ಕಾಲಕ್ಕೆ ಇದು ಬಹಳ ದೊಡ್ಡ ನಗರವಾಗಿದ್ದಿರಬಹುದು ಎಂದು ವಿದ್ವಾಂಸರು ಊಹಿಸುತ್ತಾರೆ.

[4] ದಶಪುರದ ಹೆಣ್ಣುಮಕ್ಕಳ ಚಂಚಲವಾದ, ಸದಾ ಕುತೂಹಲವನ್ನು ಹೊರಸೂಸುವ ಕಣ್ಣುಗಳು ಮೇಘವನ್ನು ಆಕರ್ಷಿಸುತ್ತವೆ. ಆ ಹೆಣ್ಣುಗಳ ಅಗಲವಾದ ಕಣ್ಣುಗಳು ಅರಳಿದ ಬಿಳಿಯ ಮಲ್ಲಿಗೆ ಹೂವಿನ ಮಧ್ಯೆ ಕುಳಿತ ಕಪ್ಪು ಬಣ್ಣದ ದುಂಬಿಗಳನ್ನು ನೆನಪಿಸುತ್ತವೆ.

## 48

**ಬಾರೊ ದಾಟಿ ಬ್ರಹ್ಮಾಽವರ್ತವನು ನಿನ್ನ ಛಾಯೆ ಚೆಲ್ಲಿ[1]**
**ಎಲ್ಲಿ ಇಂದಿಗೂ ಹಿಂದಿನೆಲಬು ಆ ಕುರುಕ್ಷೇತ್ರದಲ್ಲಿ ॥**
**ಅರಸುಗಿರಸುಗಳ ಚೆಂಡು ಕಳೆದ ಗಾಂಡೀವ ಧನ್ವ ಅಂದು**
**ನೀನು ಕಮಲಗಳ ಸೆಳೆವ ಹಾಗೆ ಮಳೆ ಸೆಳಕಿನಿಂದ ಇಂದು ॥[2]**

ನೀನು ಬ್ರಹ್ಮಾವರ್ತ ದೇಶವನ್ನು ದಾಟಿ ಬಾ. ಅನಂತರ ಕಾಣುವ ಕುರುಕ್ಷೇತ್ರದಲ್ಲಿ ಇಂದಿಗೂ ಹಿಂದಿನ ಎಲುಬುಗಳಿವೆ. ಅವುಗಳ ಮೇಲೆ ನಿನ್ನ ಛಾಯೆ ಚೆಲ್ಲು. ನೀನು ಮಳೆ ಸುರಿಸಿ ಕಮಲಪುಷ್ಪಗಳನ್ನು ನೆನೆಯಿಸುವ ಹಾಗೆ ಅಂದು ಅಲ್ಲಿ ಅರ್ಜುನನ ಗಾಂಡೀವ ಧನುಸ್ಸು ಶರವರ್ಷದಿಂದ ಅರಸುಗಿರಸುಗಳ ತಲೆಗಳನ್ನು ಚಂಡಾಡಿತ್ತು.

## 49

**ಮಡದಿ ರೇವತಿಯ ಮುಖವು ಮೂಡಿದಾ ಕಳ್ಳು ಹಾಲು ಕುಡಿದ**
**ಕೃಷ್ಣನಣ್ಣನಾ ಸಮರ ತೊರೆದು ಒಲಿದಿವಳ ದಂಡೆ ಹಿಡಿದ ॥[3]**

---

[1] ಬ್ರಹ್ಮಾವರ್ತ ಹಸ್ತಿನಾಪುರದ ವಾಯವ್ಯ ಭಾಗದಲ್ಲಿದೆ. ಇಲ್ಲಿ ಸರಸ್ವತಿ ಮತ್ತು ದೃಶದ್ವತಿ ನದಿಗಳು ಹುಟ್ಟುತ್ತವೆ. (ಕುರುಕ್ಷೇತ್ರಂಚ ಮತ್ಸ್ಯಾಶ್ಚ ಪಾಂಚಾಲಾಃ ಶೂರಸೇನಕಾಃ । ಏಷ ಬ್ರಹ್ಮರ್ಷಿ ದೇಶೋ ವೈ ಬ್ರಹ್ಮಾವರ್ತಾದನಂತರಃ – ಮನುಸ್ಮೃತಿ 2.19).

[2] ನೀನು ಕಮಲದ ಹೂಗಳ ಮೇಲೆ ಮಳೆ ಸುರಿಸುವ ಹಾಗೆ ಅಂದು ಅರ್ಜುನ ಕುರುಕ್ಷೇತ್ರದಲ್ಲಿ ತನ್ನ ಗಾಂಡೀವದಿಂದ ಸೈನಿಕರ ತಲೆಗಳ ಮೇಲೆ ಬಾಣದ ಮಳೆ ಸುರಿಸಿದ್ದ.

[3] ಬಲರಾಮ ಶ್ರೀಕೃಷ್ಣನ ಅಣ್ಣ, ವಸುದೇವ ದೇವಕಿಯರ ಗರ್ಭದಲ್ಲಿ ಜನಿಸಿದ ಏಳನೆಯ ಮಗು. ದೇವಕಿಗೆ ಹುಟ್ಟುತ್ತಿದ್ದ ಒಂದೊಂದು ಮಗುವನ್ನೂ ಅವಳ ಅಣ್ಣ ಕಂಸ ಕೊಲ್ಲುತ್ತಿದ್ದರಿಂದ ಅವನು ಗರ್ಭದಲ್ಲಿದ್ದಾಗಲೇ ಅವನನ್ನು ದೇವಕಿಯ ಗರ್ಭದಿಂದ ರೋಹಿಣಿಯ (ವಸುದೇವನ ಮತ್ತೊಬ್ಬಳು ಹೆಂಡತಿ) ಗರ್ಭದೊಳಗೆ ಸುರಕ್ಷಿತವಾಗಿ ಇರಿಸಲಾಯಿತು. ಬಲರಾಮ ಮದ್ಯಪ್ರಿಯ. ಕುಶಸ್ಥಳದ ದೊರೆ ರೇವತನ ರಾಜಕುಮಾರಿಯಾದ ರೇವತಿ ಬಲರಾಮನ ಹೆಂಡತಿ. ಭಾಗವತ ಪುರಾಣದಲ್ಲಿ ಅವಳು ರೇವತನ ಮಗ ಕಕುದ್ಮಿಯ ಮಗಳು ಎಂದಿದೆ. ಅಪ್ರತಿಮ ಸೌಂದರ್ಯವತಿಯಾಗಿದ್ದ ಅವಳನ್ನು ಯಾರಿಗೆ ಕೊಟ್ಟು ಮದುವೆ ಮಾಡಲಿ ಎಂದು ಅವಳ ತಂದೆ ಬ್ರಹ್ಮನನ್ನು ಕೇಳಿದಾಗ ಬ್ರಹ್ಮ ಬಲರಾಮನನ್ನು ಸೂಚಿಸಿದ. ಅವನು ಆದಿಶೇಷನ ಅವತಾರನಾಗಿದ್ದು ಅವನಿಗೆ ನಿನ್ನ ಮಗಳನ್ನು ಕೊಡು ಎಂದು ಹೇಳಿದ್ದ. ಬಲರಾಮ ಸ್ವಯಂ ಮಹಾವಿಷ್ಣುವಿನ ಅವತಾರವೆಂಬ ನಂಬಿಕೆಯೂ ಇದೆ (ಕೇಶವ ಧೃತಹಲಧರ ರೂಪ ಜಯ ಜಗದೀಶ ಹರೇ – ಗೀತಗೋವಿಂದ). ಮಹಾ ಪತಿವ್ರತೆಯಾದ ಅವಳು ಬಲರಾಮನ ಬೋಗುಣಿಗೆ ಮದ್ಯವನ್ನು ಸುರಿವಾಗ ಬೋಗುಣಿಯೊಳಗಿನ ಮದ್ಯದಲ್ಲಿ ಸುಂದರವಾದ ಅವಳ ಕಣ್ಣುಗಳು ಪ್ರತಿಬಿಂಬಿತವಾಗುತ್ತಿತ್ತು. ಬಲರಾಮ ಅದೆಷ್ಟು ಮದ್ಯವ್ಯಸನಿ ಎಂದರೆ, ಅವನನ್ನು ಮದ್ಯ ಸೆಳೆಯುತ್ತಿತ್ತೇ ವಿನಾ ಆ ಮದ್ಯದೊಳಗೆ ಮೂಡಿದ್ದ ರೇವತಿಯ ಚೆಲುವಾದ ಮುಖಬಿಂಬ ಅವನ ಮನಸ್ಸನ್ನು ಸೆಳೆಯುತ್ತಿರಲಿಲ್ಲ.

ಅವನು ಕೃಷ್ಣನಂತೆ ಕಪಟಿಯಲ್ಲ. ಭೀಮ ದುರ್ಯೋಧನರಿಬ್ಬರಿಗೂ ಗುರುವಾದ ಅವನು ಇಬ್ಬರನ್ನೂ ಸಮಾನವಾಗಿ ಪ್ರೀತಿಸುತ್ತಿದ್ದ. ಪಾಂಡವ ಕೌರವರು ಕುರುಕ್ಷೇತ್ರದಲ್ಲಿ ಯುದ್ಧ ಮಾಡುವರು ಎಂಬ ಸುದ್ದಿ ತಿಳಿದಾಗ ಬಂಧುಪ್ರಿಯನಾದ ಬಲರಾಮನಿಗೆ ವ್ಯಥೆಯಾಯಿತು. ಯಾರು ಸೋತರೂ, ಯಾರು ಗೆದ್ದರೂ ಅವನಿಗೆ ನೋವಾಗುತ್ತಿತ್ತು. ಕಣ್ಣೆದುರಿಗೇ ನಡೆಯಲಿದ್ದ ಬಂಧುಗಳ ಸಾವನ್ನು ನೋಡಲು

**ಕುಡಿಯೊ ನೀನು ಸರಸತಿಯ[1] ನೀರು ಬಲರಾಮನನ್ನು ನಂಬಿ**
**ಬಣ್ಣವಿರಲಿ ಕರಿ; ಬೆಳ್ಳಗಾಗು ಒಳಗೆಲ್ಲ ಬೆಳಕು ತುಂಬಿ ॥**

ಬಲರಾಮ ತನ್ನ ಮಡದಿ ರೇವತಿಯ ಸುಂದರ ಮುಖಬಿಂಬವನ್ನು ಪ್ರತಿಬಿಂಬಿಸುತ್ತಿದ್ದ ವಿಶೇಷ ಮದ್ಯವನ್ನು ಕುಡಿಯುತ್ತಿದ್ದ. ಆ ಬಲರಾಮನು ಕುರುಕ್ಷೇತ್ರ ಯುದ್ಧ ಘೋಷಣೆಯಾದಾಗ ತಪಸ್ಸಿಗೆ ಹೊರಟು ಸರಸ್ವತೀ ನದಿಯ ದಂಡೆ ತಲುಪಿದ. ಸರಸ್ವತೀ ನದಿಯ ತೀರ ಬಲರಾಮ ತಪಸ್ಸುಮಾಡಿ ಪವಿತ್ರಗೊಳಿಸಿದ ಪುಣ್ಯಕ್ಷೇತ್ರವಾಗಿದೆ. ಹೇ ನಲ್ಮೆಯ ಮೋಡವೇ, ನೀನು ಅಂತಹ ಬಲರಾಮನನ್ನು ನಂಬಿ ಸರಸ್ವತಿಯ ನೀರನ್ನು ಕುಡಿ. ಅದರ ಬಣ್ಣ ಕಪ್ಪಾಗಿದ್ದರೆ ಇರಲಿ. ಆದರೆ ನೀನು ಅದನ್ನು ಕುಡಿದ ನಂತರ ಒಳಗೆಲ್ಲ ಜ್ಞಾನದ ಬೆಳಕು ತುಂಬಿ ಬೆಳ್ಳಗಾಗುವೆ.

50

**ಜಹ್ನು ಕನ್ಯೆ[2] ತೊರೆದಿಳಿದಳಣ್ಣ ಕನಖಲದ ಮಲೆಯ ಬಳಿಗೆ[3]**

---

ಅಪೇಕ್ಷಿಸದೆ ತನ್ನ ವ್ಯಸನವನ್ನೆಲ್ಲ ತೊರೆದು ತಪಸ್ಸಾಧನೆಗೆಂದು ಸರಸ್ವತೀ ನದಿಯ ಮಡಿಲಿಗೆ ಹೋದ.

ಬಲರಾಮ ಬಹಳ ಮುಂಗೋಪಿ. ಒಮ್ಮೆ ನೈಮಿಷಾರಣ್ಯಕ್ಕೆ ಭೇಟಿ ನೀಡಿದಾಗ ಅಲ್ಲಿ ಒಂದು ಮಹಾಯಜ್ಞ ನಡೆಯುತ್ತಿತ್ತು. ಅಲ್ಲಿದ್ದ ಎಲ್ಲರೂ ಎದ್ದು ನಿಂತು ಅವನನ್ನು ಸ್ವಾಗತಿಸಿದರಾದರೂ ಸೂತ ಮುನಿ ಮಾತ್ರ ಎದ್ದೇಳಲಿಲ್ಲ. ಕೋಪಗೊಂಡ ಬಲರಾಮ ತನ್ನ ಕೈಲಿದ್ದ ಚೂಪಾದ ದರ್ಭೆಯಿಂದಲೇ ಸೂತನನ್ನು ಕೊಂದ. ಹೀಗೆ ಬ್ರಹ್ಮಹತ್ಯಾ ದೋಷವನ್ನು ಹೊಂದಿದ ಅವನಿಗೆ ಅಲ್ಲಿದ್ದ ಋಷಿಗಳು ದೋಷ ಪರಿಹಾರಾರ್ಥವಾಗಿ ತೀರ್ಥಯಾತ್ರೆ ಮಾಡೆಂದು ಸೂಚಿಸಿದರು. ಈ ತೀರ್ಥಯಾತ್ರೆಯ ಸಮಯದಲ್ಲಿ ಅವನು ಮದ್ಯಸೇವನೆಯನ್ನು ತ್ಯಜಿಸಿದ್ದ. ಒಮ್ಮೆ ಕುಡಿದ ಅಮಲಿನಲ್ಲಿ ಯಮುನಾನದಿಗೆ ತಾನಿರುವ ಜಾಗಕ್ಕೇ ಬಂದು ಹರಿ, ನಾನು ಸ್ನಾನ ಮಾಡಬೇಕು ಎಂದು ಆಜ್ಞಾಪಿಸಿದ. ಯಮುನೆ ಅವನ ಮಾತನ್ನು ಲೆಕ್ಕಿಸದೆ ಹೋದಾಗ ತನ್ನ ನೇಗಿಲಿನಿಂದ ಅವಳನ್ನು ದರದರನೆ ಎಳೆದೊಯ್ದ. ಅವಳು ಮನುಷ್ಯ ರೂಪ ತಳೆದು ಅವನ ಕ್ಷಮೆ ಯಾಚಿಸಬೇಕಾಯಿತು. ಈ ಕಾರಣದಿಂದಲೇ ಅವನಿಗೆ 'ಕಾಲಿಂದೀ ಭೇದನ ಕರ್ಷಣ' ಎಂಬ ಹೆಸರು ಬಂದಿತು. ನೇಗಿಲು ಅವನ ಆಯುಧವಾದುದರಿಂದ ಅವನಿಗೆ 'ಸಂಕರ್ಷಣ' ಎಂಬ ಹೆಸರಿದೆ. ಕಪ್ಪು ಅಥವಾ ನೀಲಿ ವಸ್ತ್ರ ಧರಿಸುವ ಕಾರಣ ಅವನಿಗೆ ನೀಲಾಂಬರ, ನೀಲವಸ್ತ್ರ ಎಂಬ ಹೆಸರುಗಳೂ ಉಂಟು.

[1] ತಪೋಭೂಮಿಯಾದ ಸರಸ್ವತೀ ನದಿತೀರದ ಸೆಳೆತ ಮದ್ಯದ ಸೆಳೆತಕ್ಕಿಂತಲೂ ಮಿಗಿಲಿನದ್ದು, ರೇವತಿಯ ಸುಂದರವಾದ ಮುಖದ ಆಕರ್ಷಣೆಗಿಂತಲೂ ಮಿಗಿಲಿನ ಆಕರ್ಷಣೆ ಉಂಟು ಮಾಡುವಂತಹುದು.

ಹಿಮಾಲಯದ ದಕ್ಷಿಣ ಭಾಗದಲ್ಲಿ ಹುಟ್ಟುವ ಸರಸ್ವತಿ ಭಾರತದ ಪುಣ್ಯತೀರ್ಥಗಳಲ್ಲೊಂದು. ಸರಸ್ವತಿ ಕುರುಕ್ಷೇತ್ರದ ಪ್ರಮುಖ ಜಲಮೂಲವಾಗಿತ್ತು (ಗಂಗಾ ಕನಖಲೇ ಪುಣ್ಯಾ ಕುರುಕ್ಷೇತ್ರೇ ಸರಸ್ವತೀ । ಗ್ರಾಮೇ ವಾ ಯದಿ ವಾಽರಣ್ಯೇ ಪುಣ್ಯಾ ಸರ್ವತ್ರ ನರ್ಮದಾ ॥) ಇದು ವಾಯವ್ಯಭಾಗದ ಮರುಭೂಮಿಯಲ್ಲಿ ಹರಿದು ಕಣ್ಮರೆಯಾಗಿಬಿಡುತ್ತದೆ.

[2] ಜಹ್ನು ಕನ್ಯೆ: ಭಗೀರಥ ಸ್ವರ್ಗದಿಂದ ಗಂಗೆಯನ್ನು ಧರೆಗೆ ತಂದ. ಭಗೀರಥನನ್ನು ಹಿಂಬಾಲಿಸಿ ಹರಿದು ಬರುತ್ತಿದ್ದ ಗಂಗೆ ಹಾದಿಯಲ್ಲಿ ಋಷ್ಯಾಶ್ರಮಗಳನ್ನು ಮುಳುಗಿಸುತ್ತ, ನಾಶ ಮಾಡುತ್ತ ಮುಂದುವರಿಯುತ್ತಿದ್ದಳು. ಜಹ್ನುವಿನ ಆಶ್ರಮವನ್ನು ಹೀಗೆ ಹಾಳುಗೆಡವಿದಾಗ ಕೋಪಗೊಂಡ ಜಹ್ನು ಋಷಿ ಗಂಗೆಯನ್ನು ಪೂರ್ತಿಯಾಗಿ ಕುಡಿದ. ಬಳಿಕ ಭಗೀರಥನ ಯಾಚನೆಯ ಮೇರೆಗೆ ಅವಳನ್ನು ಕಿವಿಯಿಂದ ಹೊರಗೆ ಬಿಟ್ಟ. ಈ ರೀತಿ ಗಂಗೆ ಜಹ್ನುಕನ್ಯೆಯಾದಳು, ಜಾಹ್ನವಿಯಾದಳು.

ಸಗರ ಸಂತತಿಗೆ[1] ಸ್ವರ್ಗದೊಂದು ಸೋಪಾನವಾಗಿ ಇಳೆಗೆ ॥[2]
ಗೌರಿ ಮುರಿವಳಬ್ಬಬ್ಬ ಹುಬ್ಬ ಎನೆ – ನಕ್ಕು ನೊರೆಗಳಿಂದ[3]
ಜಗ್ಗುತಿಹಳು ಶಿವಜಡೆಯ ಚಂದ್ರಮಣಿ ಕೈಯ ತೆರೆಗಳಿಂದ ॥

---

[3] ಕನಖಲೆ: ಹರಿದ್ವಾರದ ಸಮೀಪದಲ್ಲಿರುವ ಪುಣ್ಯಕ್ಷೇತ್ರ. ಗಂಗೆ ಸ್ವರ್ಗದಿಂದ ಧುಮುಕಿದಾಗ ಈ ಜಾಗದಲ್ಲೇ ಇಳಿದಳು ಎಂಬುದು ಪ್ರತೀತಿ. ಕನಖಲದಲ್ಲಿ ಸ್ನಾನ ಮಾಡಿದರೆ ಎಂತಹ ಪಾಪಿಯೂ ಮುಕ್ತಿ ಹೊಂದುತ್ತಾನೆ (ಖಲಃ ಕೋ ನಾತ್ರ ಮುಕ್ತಿಂ ವೈ ಭಜತೇ ತತ್ರ ಮಜ್ಜನಾತ್ । ಅತಃ ಕನಖಲಂ ತೀರ್ಥ ನಾಮ್ನಃ ಚಕುರ್ಮುನೀಶ್ವರಾಃ ॥ – ಗಂಗಾ ಮಾಹಾತ್ಮ್ಯ, ಸ್ಕಂದ ಪುರಾಣ). ಒಂದಾನೊಂದು ಕಾಲದಲ್ಲಿ ಇಲ್ಲಿ ಚಿನ್ನ(ಕನಕ)ದ ಗಣಿ ಇದ್ದಿರಬಹುದು, ಈ ಕಾರಣದಿಂದಲೂ ಇದಕ್ಕೆ ಈ ಹೆಸರು ಬಂದಿರಬಹುದು (ಏತೇ ಕನಖಲಾ ರಾಜನ್ ಋಷೀಣಾಂ ದಯಿತಾ ನಗಾಃ – ಮಹಾಭಾರತ ವನಪರ್ವ 85.5)

[1] ಸಗರ: ಸೂರ್ಯವಂಶದ ದೊರೆ (ಸ + ಗರ) ವಿಷದೊಂದಿಗೆ ಜನಿಸಿದವನು ಎಂಬುದು ಆ ಪದದ ಅರ್ಥ. ಅವನ ತಾಯಿ ಗರ್ಭಿಣಿಯಾಗಿದ್ದಾಗ ಅವಳ ಸವತಿ ಅವಳಿಗೆ ವಿಷ ಉಣಿಸಿರುತ್ತಾಳೆ. ಆದ್ದರಿಂದ ಅವನಿಗೆ ಸಗರನೆಂಬ ಹೆಸರು ಬಂದಿತು. ಇವನು ನೂರನೆಯ ಅಶ್ವಮೇಧಯಾಗಕ್ಕೆ ಸಿದ್ಧತೆ ನಡೆಸಿದಾಗ ಇಂದ್ರನಿಗೆ ತನ್ನ ಪದವಿ ಕಳೆದುಕೊಳ್ಳುವೆನೆಂಬ ಭಯವಾಯಿತು. ಏಕೆಂದರೆ ಆ ಯಜ್ಞ ಯಶಸ್ವಿಯಾಗಿ ಪೂರ್ಣಗೊಂಡಿದ್ದರೆ ಸಗರನೇ ಇಂದ್ರಪದವಿ ಹೊಂದುತ್ತಿದ್ದ. ಯಜ್ಞಕ್ಕೆ ವಿಘ್ನ ತರಲೆಂದು ದೇವೇಂದ್ರ ಯಜ್ಞಾಶ್ವವನ್ನು ಪಾತಾಳ ಲೋಕದಲ್ಲಿ ಕಪಿಲ ಮುನಿಯ ಆಶ್ರಮದ ಸಮೀಪದಲ್ಲಿ ಅಡಗಿಸಿಟ್ಟ. ಸಗರನ 60 ಸಾವಿರ ಮಕ್ಕಳು ಕುದುರೆಯನ್ನು ಹುಡುಕುತ್ತ ನೆಲವನ್ನು ಅಗೆದು ಪಾತಾಳ ತಲುಪಿದರು. ಅಲ್ಲಿ ಕಪಿಲನ ಆಶ್ರಮದ ಸಮೀಪದಲ್ಲಿ ಹುಲ್ಲು ಮೇಯುತ್ತಿದ್ದ ಕುದುರೆಯನ್ನು ಕಂಡು ಕಪಿಲನನ್ನು ಕಳ್ಳನೆಂದು ನಿಂದಿಸಿದರು. ಕೋಪಗೊಂಡ ಕಪಿಲ ತನ್ನ ತಪೋಗ್ನಿಯಿಂದ ಅಷ್ಟೂ ಜನರನ್ನು ಸುಟ್ಟು ಭಸ್ಮ ಮಾಡಿದ. ನೂರು ವರ್ಷಗಳಾದರೂ ಅವರ ಬೂದಿಗೆ ಸಂಸ್ಕಾರವಾಗಲಿಲ್ಲ. ಪವಿತ್ರ ಗಂಗೆಯನ್ನು ಆ ಭಸ್ಮದ ಮೇಲೆ ಹರಿಸದೇ ಅವರಿಗೆ ಮುಕ್ತಿ ಸಿಗುವಂತಿರಲಿಲ್ಲ. ಸಗರನಿಗಾಗಲಿ, ಅವನ ಮಗ ಅಂಶುಮಾನನಿಗಾಗಲಿ, ಅವನ ಮಗ ದಿಲೀಪನಿಗಾಗಲಿ ಗಂಗೆಯನ್ನು ಧರೆಗಿಳಿಸಲು ಸಾಧ್ಯವಾಗಲಿಲ್ಲ. ಕೊನೆಗೆ ಸಗರನ ಮರಿಮೊಮ್ಮಗ ಭಗೀರಥನ ಪ್ರಯತ್ನದಿಂದ ಗಂಗೆ ಧರೆಗಿಳಿದು ಪಾತಾಳದಲ್ಲಿದ್ದ ಭಗೀರಥನ ಮುತ್ತಾತಂದಿರ ಭಸ್ಮದ ಮೇಲೆ ಹರಿದು ಅವರಿಗೆ ಮುಕ್ತಿ ಕಲ್ಪಿಸಿದಳು. ಭಗೀರಥನ ಈ ಪ್ರಯತ್ನವನ್ನು ಶ್ಲಾಘಿಸಿದ ಬ್ರಹ್ಮನು ಗಂಗೆಗೆ ಭಾಗೀರಥಿ ಎಂದು ಹೆಸರಿಟ್ಟ. ರಾಮಾಯಣದ ಬಾಲಕಾಂಡದಲ್ಲಿ ಈ ಕಥೆಯ ಪೂರ್ಣ ನಿರೂಪಣೆ ಇದೆ.

[2] ಗಂಗೆ ಸ್ವರ್ಗಲೋಕದಿಂದ ಧುಮುಕುವ ರಭಸಕ್ಕೆ ಭೂಮಿ ಪೂರ್ತಿಯಾಗಿ ಕೊಚ್ಚಿಕೊಂಡು ಹೋಗುತ್ತಿತ್ತು. ಅವಳು ಮೊದಲು ಶಿವನ ತಲೆಯ ಮೇಲೆ ಬೀಳಲಿ, ಆಗ ರಭಸ ಕಡಿಮೆಯಾಗಬಹುದು ಎಂದು ಬ್ರಹ್ಮ ಭಗೀರಥನಿಗೆ ಸೂಚಿಸಿದ. ಅಂತೆಯೇ ಭಗೀರಥ ಶಿವನ ಕುರಿತು ತಪಸ್ಸು ಮಾಡಿದ. ಒಂದು ವರ್ಷದ ಕಠೋರ ತಪಸ್ಸಿನ ನಂತರ ಶಿವ ಭಗೀರಥನ ಕೋರಿಕೆಗೆ ಮನ್ನಿಸಿದ. ಸೊಕ್ಕಿನಿಂದ ಕೂಡಿದ್ದ ಗಂಗೆ ಶಿವನ ಸಮೇತವಾಗಿ ಭೂಮಿಯನ್ನು ಮುಳುಗಿಸುತ್ತೇನೆ ಎಂದುಕೊಂಡು ರಭಸದಿಂದ ಧರೆಗಿಳಿದಾಗ ಶಿವ ಅವಳನ್ನು ತಲೆಯಲ್ಲಿ ಧರಿಸಿಕೊಂಡು ಅವಳು ಹೊರಬರದಂತೆ ತನ್ನ ಜಟೆಯನ್ನು ಕಟ್ಟಿಕೊಂಡ. ಶಿವನ ಜಟಿಲವಾದ ಜಟೆಯೊಳಗೆ ಎಷ್ಟು ಹೊತ್ತು ಸುತ್ತಾಡಿದರೂ ಗಂಗೆಗೆ ಹೊರಬರುವ ದಾರಿ ಕಾಣಿಸಲಿಲ್ಲ. ಕೊನೆಗೆ ಭಗೀರಥನ ಕೋರಿಕೆಯ ಮೇರೆಗೆ ಗಂಗೆಯನ್ನು ತನ್ನ ಜಟೆಯಿಂದ ಏಳುಧಾರೆಗಳಲ್ಲಿ ಹರಿಸಿದ. ಅವನ್ನು ಸಪ್ತಸಿಂಧು ಎಂದು ಕರೆಯುತ್ತಾರೆ. ಈ ಘಟನೆಯ ನಂತರ ಶಿವನಿಗೆ ಗಂಗಾಧರ ಎಂಬ ಹೆಸರು ಬಂದಿತು.

[3] ನದಿ ಹರಿದಾಗ ಹುಟ್ಟುವ ಬಿಳಿಯ ನೊರೆಯನ್ನು ಕವಿ ಇಲ್ಲಿ ಗಂಗೆಯ ನಗುವಿಗೆ ಹೋಲಿಸಿದ್ದಾನೆ.

ಜಹ್ನು ಕನ್ಯೆ ಗಂಗೆಯು ಸ್ವರ್ಗ ತೊರೆದು ಸಗರ ಸಂತತಿಗೆ ಒಂದು ಸೋಪಾನವಾಗಿ ಇಳೆಗೆ ಇಳಿಯುವಾಗ ಕನಖಲದ ಮಲೆಯ ಬಳಿಗೆ ಬಂದಳು. ಅವಳನ್ನು ನೋಡುತ್ತ ಗೌರಿ ಹುಬ್ಬನ್ನು ಕೊಂಕಿಸಿದಳು. ಆಗ ಗಂಗೆ ನಕ್ಕು ಶಿವ ಜಡೆಯ ಚಂದ್ರಮಣಿಯನ್ನು ನೊರೆಗಳಿಂದ ಕೈಯ ತೆರೆಗಳಿಂದ ಜಗ್ಗಿದಳು.

51

**ನೀನು ಬಾನಿನಲಿ ಕಾಲು ಸೋತು ಬರೆ, ಗಂಗೆ ಕುಡಿಯಲೆಂದು**
**ಸ್ವರ್ಗದಾನೆಯೇ[1] ಸೊಂಡೆ ಚಾಚಿದೊಲು ಕಾಂಬೆ ನೋಟವೊಂದು ॥**
**ಬೇರೆ ಕಾಣುವದು ನೋಟ, ನೀರಿನಲಿ ಛಾಯೆ ಮೂಡಿದಂತೆ**
**ಗಂಗೆಯನ್ನೆ ಮತ್ತೊಂದು ಕಡೆಗೆ[2] ಆ ಯಮುನೆ ಕೂಡಿದಂತೆ ॥**

ಹೇ ಶುಭಕರನೇ, ನೀನು ಬಾನಿನಲ್ಲಿ ಕಾಲು ಸೋತು ಗಂಗೆಯನ್ನು ಕುಡಿಯಲೆಂದು ಬರುವೆ. ಆಗ ಅದರಲ್ಲಿ ಸ್ವರ್ಗದಾನೆಯೇ ಸೊಂಡಿಲು ಚಾಚಿದಂತಹ ಒಂದು ನೋಟವನ್ನು ಕಾಣುವೆ. ಹಾಗೆ ನೋಡುತ್ತಿದ್ದಾಗ ನೀರಿನಲ್ಲಿ ಛಾಯೆ ಮೂಡಿದಂತೆ ಗಂಗೆಯನ್ನೇ ಆ ಯಮುನೆ ಮತ್ತೊಂದು ಕಡೆಗೆ ಕೂಡಿದಂತೆ ನೋಟ ಕಾಣುವದು.

52

**ಮಂಜು ಬೆಟ್ಟ ಮುಡಿಯಟ್ಟದಲ್ಲಿ ಕಸ್ತೂರಿ ಮೆಟ್ಟಿನಲ್ಲಿ[3]**
**ಇಳೆಯ ತೊಳೆಯೆ, ಹೊಳೆಯಾಗಿ ಬರುವ ಸಿರಿಗಂಗೆ ಹುಟ್ಟಿನಲ್ಲಿ ॥[4]**
**ದಾರಿ ದಣಿವಿಕೆಯ ಕಳೆಯೊ ನೀನು ಆ ಕೋಡಿನಲ್ಲಿ ಕುಂತು**
**ಶಿವನ ನಂದಿ ಕೋಡೆತ್ತಿ ಹಿಡಿದ ಕರಿ ಮಣ್ಣ ಮುದ್ದೆಯಂತು ॥[5]**

---

[1] ಅಷ್ಟ ದಿಗ್ಗಜಗಳಲ್ಲಿ ಒಂದಾದ ಐರಾವತ. ಅಷ್ಟ ದಿಗ್ಗಜಗಳನ್ನು ಸ್ವರ್ಗದ ಆನೆ ಎಂದು ಕರೆಯಲಾಗಿದೆ. ಈ ಎಂಟು ದಿಕ್ಕುಗಳಿಗೆ ಎಂಟು ದೇವತೆಗಳಿರುತ್ತಾರೆ. ಅವರನ್ನು ಅಷ್ಟದಿಕ್ಪಾಲಕರೆನ್ನುತ್ತಾರೆ. (ಇಂದ್ರೋ ವಹ್ನಿಃ ಪಿತೃಪತಿಃ ನೈಋತೋ ವರುಣೋ ಮಹತ್ । ಕುಬೇರಃ ಈಶಃ ಪತಯಃ ಪೂರ್ವಾದೀನಾಂ ದಿಶಾಃ ಕ್ರಮಾತ್ – ಅಮರಕೋಶ).

[2] ಗಂಗೆ ಯಮುನೆಯರು ಪ್ರಯಾಗ ಅಥವಾ ಅಲಹಾಬಾದ್‌ನಲ್ಲಿ ಕೂಡುತ್ತಾರೆ. ಇಲ್ಲಿ ಕಪ್ಪಾದ ಮೋಡ ಬಾಯಾರಿ ಗಂಗೆಯನ್ನು ಹೀರುವಾಗ ಪ್ರಯಾಗವಲ್ಲದೇ ಮತ್ತೊಂದು ಜಾಗದಲ್ಲಿ ಗಂಗೆ ಯಮುನೆಯರು ಸೇರುತ್ತಿದ್ದಾರೆ ಎಂಬಂತೆ ಭಾಸವಾಗುತ್ತದೆ. ಮೋಡದಂತೆಯೇ ಯಮುನೆ ಕಪ್ಪುಬಣ್ಣದವಳಾದರೆ ಗಂಗೆ ಬಿಳಿಯ ಬಣ್ಣದವಳು. ಕಪ್ಪು–ಬಿಳುಪುಗಳ ಸಮಾಗಮವಾಗುತ್ತಿದೆ.

[3] ಸುಗಂಧವನ್ನು ಹೊರಸೂಸುವ ಕಸ್ತೂರಿ ಮೃಗಗಳು ಹಿಮಾಲಯದಲ್ಲಿ ಹೆಚ್ಚಾಗಿ ವಾಸಿಸುತ್ತವೆ.

[4] ಹಿಮಾಲಯದಲ್ಲಿ; ಗಂಗೆ ಸ್ವರ್ಗ, ಭೂಮಿ, ಪಾತಾಳಗಳಲ್ಲಿ ಹರಿಯುವವಳಾದಳೂ ಭೂಮಿಯ ಮೇಲೆ ಹರಿಯುವ ಗಂಗೆಯನ್ನು ಹಿಮಾಲಯದ ಮಗಳೆಂದು ಕರೆಯುವುದುಂಟು.

[5] ಹೋರಿ ಮದಿಸಿದ ಆನೆಗಳಂತೆಯೇ ನೆಲದ ಮೇಲಿನ ಮಣ್ಣನ್ನು ತನ್ನ ಕೋಡಿನಿಂದ ಅಗೆದು ಎತ್ತುತ್ತವೆ.

ಮಂಜು ಬೆಟ್ಟದ ಮುಡಿಯ ಅಟ್ಟದಲ್ಲಿ ಸುಗಂಧ ದ್ರವ್ಯ ಸೂಸುವ ಕಸ್ತೂರಿ ಮೃಗ ತುಳಿದಾಡುವ ಎಡೆಯಲ್ಲಿ ಗಂಗೆ ಹುಟ್ಟಿದ್ದಾಳೆ. ಆ ಸಿರಿ ಗಂಗೆ ಇಳೆಯನ್ನು ತೊಳೆಯಲು ಹೊಳೆಯಾಗಿ ಹರಿದು ಬರುತ್ತಿದ್ದಾಳೆ. ನೀನು ದಾರಿಯ ದಣಿವನ್ನು ಕಳೆಯಲು ಆ ಶಿಖರದ ಕೋಡಿನಲ್ಲಿ ಕುಳಿತುಕೊ. ಮಣ್ಣಿನ ಮುದ್ದೆ ಅಂಟಿದ ತನ್ನ ಕೊಂಬುಗಳನ್ನು ಶಿವನ ನಂದಿಯು ಎತ್ತಿ ಕುಳಿತಂತೆ ಕುಳಿತುಕೊ.

53

**ದೇವದಾರು ಮರ[1] ತಾಕಲಾಡಿ, ದಾವಾಗ್ನಿ ಕಿಡಿಯ ಸೂಸೆ**
**ಹೊತ್ತಿ ಬಾಲ, ಸುತ್ತಾಡಿ ಚಮರಿಮೃಗವೆತ್ತಿ ಬಾಲ ಬೀಸೆ ॥[2]**
**ಕುತ್ತದಲ್ಲಿ ಇರೆ ಸುರಿಸು ನೀರು; ಉರಿ ಈಡೆ ನಿನ್ನ ಮಳೆಗೆ?**
**ಕಷ್ಟ ಕಳೆವುದೇ ಇಷ್ಟವಹುದು ಉತ್ತಮರ ಶಕ್ತಿಗಳಿಗೆ ॥**

ಆ ಮಲೆಯಲ್ಲಿ ದೇವದಾರು ಮರಗಳು ಒಂದಕ್ಕೊಂದು ತಾಕಲಾಡುತ್ತ ಕಾಳ್ಗಿಚ್ಚಿನ ಕಿಡಿಯನ್ನು ಹೊತ್ತಿಸುತ್ತವೆ. ಆಗ ಚವರಿ ಮೃಗದ ಬಾಲಕ್ಕೆ ಬೆಂಕಿ ಹೊತ್ತಿಕೊಳ್ಳುತ್ತದೆ. ಅದು ವಿಪತ್ತಿನಲ್ಲಿದ್ದು ಬಾಲ ಬೀಸಿ ನರಳುವಾಗ, ಗೆಳೆಯ ಮೋಡವೇ ನೀರು ಸುರಿಸು. ನಿನ್ನ ಮಳೆಗೆ ಉರಿ ಸಮವೇ? ನಿನ್ನಂತಹ ಉತ್ತಮರ ಶಕ್ತಿಗೆ ಇತರರ ಕಷ್ಟ ಕಳೆಯುವುದೇ ಸದಾ ಹಿತವಾದ ಇಷ್ಟವಲ್ಲವೇ?

54

**ಸಿಟ್ಟಿನಿಂದ ಸಿಡಿದೆದ್ದು ಶರಭ[3] ಬರೆ ತಾಗಿ, ಕಂಡು ಮಿದುವು,**
**ಮೂಳೆಗಳನು ಮುರಿಕೊಳ್ಳಲೆಂದು ಹವಣಿಸಿದ ಹಾಗೆ ಅದುವು ॥**
**ಆಲಿಕಲ್ಲಿನಿಂದಿಟ್ಟು ಕುಟ್ಟು, ಅದರಂಥ ಮೂಢರೊಳರೇ?**
**ಮುಗಿಲಿಗೆಂದು ಕೈಹಾಕಿ ಹಾರಿದರೆ ಕಾಲು ಮುರಿದುಕೊಳರೇ? ॥**

ನೀನು ಕೋಮಲವಾಗಿ, ಮಿದುವಾಗಿರುವುದನ್ನು ಕಂಡು ಶರಭ ಪ್ರಾಣಿಯು ಸಿಡಿದೆದ್ದು ನಿನ್ನನ್ನು ಎದುರಿಸಲು ನಿನ್ನನ್ನು ತಾಗಿ ಬರುತ್ತದೆ. ಹಾಗೆ ಅದು ಬರುವುದು ಮೂಳೆಗಳನ್ನು ಮುರಿದುಕೊಳ್ಳಲೆಂದು ಹವಣಿಸಿದ ಹಾಗಿದೆ. ಅದನ್ನು ಆಲಿಕಲ್ಲಿನಿಂದ ಬಲವಾಗಿ ಕುಟ್ಟು.

---

[1] ಮೂಲದ 'ಸರಳವೃಕ್ಷ' (ಪೈನಸ್ ಲಾಂಗಿಫೋಲಿಯಾ) ಎಂಬ ಪದವನ್ನು ಬೇಂದ್ರೆ ದೇವದಾರು ಎಂದು ಅನುವಾದಿಸಿದ್ದಾರೆ.

[2] ಚಮರೀಮೃಗ ಹಿಮಾಲಯದ ತಪ್ಪಲಲ್ಲಿ ವಾಸಿಸುವ ಒಂದು ಸಸ್ಯಾಹಾರಿ ಮೃಗ. ಇದರ ಬಾಲ ದಪ್ಪನಾಗಿದ್ದು ಸುಲಭವಾಗಿ ಬೆಂಕಿಗೆ ಈಡಾಗಬಲ್ಲುದಾಗಿರುತ್ತದೆ.

[3] ಶರಭ ಎಂಟು ಕಾಲುಗಳಿರುವ (ಮೇಲ್ಮುಖವಾಗಿ ನಾಲ್ಕು, ಕೆಳಮುಖವಾಗಿ ನಾಲ್ಕು) ಒಂದು ಪೌರಾಣಿಕ ಪ್ರಾಣಿ. ಇದು ಸಿಂಹದ ವೈರಿ. ಸಿಂಹಕ್ಕಿಂತಲೂ ಬಲಶಾಲಿಯಾದ ಪ್ರಾಣಿ. ಮೋಡ ಗಗನ ಮಾರ್ಗದಲ್ಲಿ ಗುಡುಗುತ್ತ, ಗರ್ಜಿಸುತ್ತ ಬರುತ್ತಿದ್ದರೆ ಈ ಶರಭಕ್ಕೆ ಅದು ಸಿಂಹದ ಗರ್ಜನೆಯಂತೆ ಕೇಳಿಸುತ್ತದೆ. ಮೋಡವನ್ನೇ ಸಿಂಹವೆಂದು ತಪ್ಪಾಗಿ ತಿಳಿದು ಕೆರಳಿ ಮೋಡದತ್ತ ಹಾರುತ್ತದೆ.

ಅದರಂಥ ಮೂಢರು ಇರುವರೇ? ಮುಗಿಲಿಗೆಂದು ಕೈಹಾಕಿದರೆ ಕಾಲು ಮುರಿದುಕೊಳ್ಳುವುದಿಲ್ಲವೇ?

55

**ಅಲ್ಲೆ ಕಲ್ಲಿನಲಿ ಶಿವನ ಪಾದ ಮೂಡಿಹವು[1] ಸಿದ್ಧರದನು[2]**
**ಪೂಜಿಸುವರು ಎಂದೆಂದು, ಹೋಗು ಬಲವಂದು, ಅದುವೆ ಹದನು ॥[3]**
**ಕರಣವಳಿಯೆ, ಉರು ಪಾಪ ತೊಳೆಯೆ, ದಾಟುವರು ಸಾವಿನೆಲ್ಲೆ**
**ನಂಬಿದವರು ಗಳಿಸುವರು ಸ್ಥಿರದ ಗಣಪದವಿಯನ್ನು ಇಲ್ಲೆ ॥**

ಅಲ್ಲೆ ಕಲ್ಲಿನಲಿ ಶಿವನ ಪಾದಗಳು ಮೂಡಿವೆ. ಅದನ್ನು ಸಿದ್ಧರು ಪೂಜಿಸುತ್ತಾರೆ. ಹೋಗು, ಅದಕ್ಕೆ ಬಲಗಡೆಯಿಂದ ಪ್ರದಕ್ಷಿಣೆ ಹಾಕು. ಅದೇ ಉತ್ತಮವಾದ ನಡೆ. ದೇಹವನ್ನು ಬಿಟ್ಟವರು ಹೆಚ್ಚಿನ ಪಾಪವನ್ನು ತೊಳೆಯಲು, ಸಾವಿನ ಎಲ್ಲೆ ದಾಟಿ ಮೋಕ್ಷವನ್ನು ಪಡೆಯುವೆವೆಂದು ನಂಬಿದವರು ಇಲ್ಲಿಯೇ ಸ್ಥಿರವಾದ ಗಣಪದವಿಯನ್ನು ಗಳಿಸುವರು.

56

**ತೂತು ಬಿದಿರು ಕೊಳಲಾಗಿ ಊದುತಿರೆ, ಗಾಳಿ ತೂರಿ ನೂಗಿ**
**ಶಿವನ ತ್ರಿಪುರ ಜಯಗೀತ[4] ಹಾಡೆ ಕಿನ್ನರರು[5] ದನಿಯ ತೂಗಿ ॥**
**ನಿನ್ನ ಗುಡುಗು ಮದ್ದಳೆ ಮೃದಂಗದೊಲು ತುಂಬೆ ದರಿಯ ಜಾಡು**
**ಕೂಡಿದಂತೆ ಸರಿ, ಶಿವನ ನಾಟ್ಯ ಸಂಗೀತದೀಡು ಜೋಡು ॥**

---

[1] ಹರಿದ್ವಾರದ ಪಕ್ಕದಲ್ಲಿರುವ ಬೆಟ್ಟದಲ್ಲಿ ಈ ಜಾಗವಿದೆ. ಶಿವನ ಪಾದವನ್ನು ಕೆತ್ತಿರುವ ಇದನ್ನು ಸ್ಥಳೀಯರು 'ಹರ್ ಕಾ ಪೈರಿ' ಎನ್ನುತ್ತಾರೆ. ಶಂಭುರಹಸ್ಯ ಎಂಬ ಕೃತಿಯಲ್ಲಿ ಇದನ್ನು ಶ್ರೀಚರಣನ್ಯಾಸ ಎಂದು ಕರೆದಿರುವರು.

[2] ಹಿಮಾಲಯ ಸಿದ್ಧರಿಗೆ ಅಂದರೆ ಯೋಗಸಾಧಕರಿಗೆ ಅತ್ಯಂತ ಪ್ರಿಯವಾದ ಕ್ಷೇತ್ರವಾಗಿದೆ.

[3] ಪ್ರದಕ್ಷಿಣೆ ಹಾಕಿ ನಮಸ್ಕರಿಸುವುದು.

ಕಾಳಿದಾಸನಿಗೆ ಪ್ರದಕ್ಷಿಣ ನಮಸ್ಕಾರ ಬಹಳ ಪ್ರಿಯವಾದ ಉಪಾಸನಾ ಆಚರಣೆಯಾಗಿದೆ. ಶಾಕುಂತಲೆ ಗಂಡನ ಮನೆಗೆ ಹೋಗುವಾಗಲೂ ಯಜ್ಞಶಾಲೆಗೆ ಪ್ರದಕ್ಷಿಣ ನಮಸ್ಕಾರ ಮಾಡಿ ಹೊರಡು ಎಂದು ಕಣ್ವರ ಬಾಯಿಂದ ಹೇಳಿಸುತ್ತಾನೆ.

[4] ತಾರಾಕ್ಷ, ರಕ್ತಾಕ್ಷ ಮತ್ತು ವಿದ್ಯುನ್ಮಾಲಿ ಎಂಬ ಮೂವರು ರಾಕ್ಷಸರಿಗೆ ದಾನವ ಶಿಲ್ಪಿ ಮಯನು ಆಕಾಶದಲ್ಲಿ ಮೂರು ಅರಮನೆಗಳನ್ನು ಕಟ್ಟಿಕೊಡುತ್ತಾನೆ – ಒಂದು ಚಿನ್ನದ್ದು, ಒಂದು ಬೆಳ್ಳಿಯದು ಮತ್ತು ಒಂದು ಕಬ್ಬಿಣದ್ದು. ಶಿವ ತ್ರಿಪುರಗಳನ್ನು ಸುಟ್ಟು ಬೂದಿ ಮಾಡಿ ತ್ರಿಪುರಾಂತಕನೆಂಬ ಹೆಸರು ಪಡೆಯುತ್ತಾನೆ. ಈ ತ್ರಿಪುರ ದಹನದ ಹಾಡನ್ನು ಕಿನ್ನರರು ವಾದ್ಯ ಸಮೇತ ಹಾಡುತ್ತಾರೆ. ಆ ವಾದ್ಯಗೋಷ್ಠಿಯೊಂದಿಗೆ ಮೋಡದ ಗರ್ಜನೆಯೂ ಸೇರಿಕೊಂಡರೆ ಗೋಷ್ಠಿ ಪರಿಪೂರ್ಣವಾಗುತ್ತದೆ.

[5] ಒಂದು ಜಾತಿಯ ದೇವತೆಗಳು. ಇವರ ಅರ್ಧ ಶರೀರ ಮನುಷ್ಯರದ್ದೂ, ಉಳಿದರ್ಧ ಶರೀರ ಕುದುರೆಯದ್ದೂ ಆಗಿರುತ್ತದೆ (ಕುತ್ಸಿತಾ ನರಾಃ ಕಿನ್ನರಾಃ ಅಶ್ವಮುಖತ್ವಾತ್).

ಶಿವನ ತ್ರಿಪುರದಲ್ಲಿ ಕಿನ್ನರರು ದನಿಯ ತೂಗುತ್ತ ಜಯಗೀತೆ ಹಾಡುತ್ತಿದ್ದಾರೆ. ಗಾಳಿ ತೂರಿ ನುಗ್ಗಲು ತೂತು ಬಿದಿರು ಕೊಳಲಾಗಿ ಊದುತ್ತಿದೆ! ಅವುಗಳ ಜೊತೆಗೆ ನಿನ್ನ ಗುಡುಗು ಮದ್ದಳೆ ಮೃದಂಗದಂತೆ ಕಂದರಗಳ ಜಾಡನ್ನು ತುಂಬಲಿ. ಆಗ ಶಿವನ ನಾಟ್ಯ ಸಂಗೀತಕ್ಕೆ ಈಡು ಜೋಡಾಗುತ್ತದೆ!

57

**ಮಂಜು ಬೆಟ್ಟವನು ಮೀಟು, ಹಂಸದ್ವಾರವನು[1] ದಾಟು ಓಡು**
**ಕ್ರೌಂಚ-ರಂಧ್ರದಲಿ[2] ವೀರ ಭಾರ್ಗವನಪೂರ್ವಶೌರ್ಯ ನೋಡು ॥**
**ಉತ್ತರಕ್ಕೆ ಹರಿ ಹಾಗೆ, ತೋರುತಿರೆ ನಿನ್ನ ರೂಪ ಭೇದ**
**ಬಲಿಯ[3] ಮೆಟ್ಟಲೆಂದೆತ್ತಿದಂಥ ವಿಷ್ಣುವಿನ ಶ್ಯಾಮ ಪಾದ ॥**

ಹೇ ಗೆಳೆಯನೇ, ನೀನು ಹಿಮಾಲಯ ಪರ್ವತದ ಹಂಸದ್ವಾರವನ್ನು ದಾಟಿ ಮುಂದಕ್ಕೆ ಹೋಗು. ಆಗ ನಿನಗೆ ಕ್ರೌಂಚ ಪರ್ವತ ಎದುರಾಗುತ್ತದೆ. ಅಂತಹ ರಂಧ್ರವನ್ನು ನೋಡು. ಅದರ ಮೂಲಕ ಹಾದು ಹೋಗು. ಪರಶು ರಾಮನದು ಅದೆಂತಹ ಶೌರ್ಯ ಎಂಬುದನ್ನು ತಿಳಿ. ಹಾಗೇ ಉತ್ತರಕ್ಕೆ ಹಾರಿ ನೀನು ಅಪಾರ ರೂಪದಿಂದ ಸಾಗುತ್ತಿರಲು ಬಲಿಯನ್ನು ಮೆಟ್ಟಲು ವಿಷ್ಣು ಎತ್ತಿದಂತಹ ಶ್ಯಾಮಪಾದದಂತೆ ತೋರುತ್ತಿರುವೆ.

58

**ಹಿಂದೆ ಸಂದ ರಾವಣನು ಬಿಡಿಸಿದನು ಇದರ ಸಂದು ಜೋಡು[4]**

---

[1] ಮಾನಸ ಸರೋವರಕ್ಕೆ ಹಂಸಪಕ್ಷಿಗಳು ವರ್ಷಕ್ಕೊಮ್ಮೆ ಹಾರಿ ಬರುತ್ತವೆ. ಅವು ಮಾನಸ ಸರೋವರದೊಳಗೆ ಪ್ರವೇಶಿಸುವ ದ್ವಾರವನ್ನು ಹಂಸದ್ವಾರವೆಂದು ಕರೆಯುತ್ತಾರೆ.

[2] ಮೈನಾಕ ಪರ್ವತದ ಮಗ ಕ್ರೌಂಚ ಪರ್ವತ. ಕಾರ್ತಿಕೇಯ ಯಾವುದೋ ಕಾರಣಕ್ಕೆ ಸಿಟ್ಟಿಗೆದ್ದು ಕ್ರೌಂಚ ಪರ್ವತವನ್ನು ಎರಡು ಹೋಳಾಗಿಸಿದ್ದ. ಆ ಸಮಯದಲ್ಲಿ ಜಮದಗ್ನಿಯ ಮಗನಾದ ಪರಶುರಾಮ ಶಿವನಲ್ಲಿ ಧನುರ್ವಿದ್ಯೆ ಕಲಿಯುತ್ತಿದ್ದ. ತಾನೂ ಕಾರ್ತಿಕೇಯ ಮೆರೆದ ಸಾಹಸ ಮೆರೆಯಬಲ್ಲೆನೇ ಎಂದು ತಿಳಿಯಲು ಅವನು ಮುರಿದು ಬಿದ್ದಿದ್ದ ಕ್ರೌಂಚ ಪರ್ವತಕ್ಕೆ ಬಾಣದಿಂದ ಹೊಡೆದ. ಆ ಬಾಣದ ರಭಸಕ್ಕೆ ಕ್ರೌಂಚ ಪರ್ವತದಲ್ಲಿ ಒಂದು ರಂಧ್ರ ಮೂಡಿತು. ಆ ರಂಧ್ರ ಈಗಲೂ ಇದೆ. ಅದನ್ನು 'ಕ್ರೌಂಚರಂಧ್ರ'ವೆಂದೇ ಕರೆಯುತ್ತಾರೆ. ಪರಶುರಾಮನು ಕ್ಷತ್ರಿಯ ಕುಲವನ್ನು ನಾಶ ಮಾಡಲು ದಕ್ಷಿಣ ದಿಕ್ಕಿಗೆ ಹೊರಟಾಗ ಕ್ರೌಂಚಪರ್ವತ ಅಡ್ಡ ಬಂದಿತು. ಆಗ ಅವನು ಕೋಪದಿಂದ ಅದರಲ್ಲಿ ಹೀಗೆ ರಂಧ್ರ ಮಾಡಿದ ಎಂಬ ಕಥನವೂ ಉಂಟು.

[3] ಪ್ರಹ್ಲಾದನ ಮೊಮ್ಮಗನೂ, ವಿರೋಚನನ ಮಗನೂ ಆದ ಬಲಿಚಕ್ರವರ್ತಿ ರಾಕ್ಷಸ ಕುಲದ ಅರಸು. ದೇವತೆಗಳನ್ನು ಗೆದ್ದು ಮೂರೂ ಲೋಕಗಳನ್ನು ಆಕ್ರಮಿಸಿ ಆಳ್ವಿಕೆ ಮಾಡುತ್ತಿರುತ್ತಾನೆ. ವಿಷ್ಣು ವಾಮನ ರೂಪದಲ್ಲಿ ಬಂದು ಬಲಿಯನ್ನು ಮೂರು ಹೆಜ್ಜೆ ಜಾಗವನ್ನು ದಾನವಾಗಿ ಕೇಳುತ್ತಾನೆ. ವಿಷ್ಣುವಿನ ಮೊದಲ ಹೆಜ್ಜೆ ಭೂಮಿಯನ್ನೂ ಎರಡನೆಯ ಹೆಜ್ಜೆ ಆಕಾಶವನ್ನು ಆವರಿಸುತ್ತದೆ. ಮೋಡವು ಹೀಗೆ ಗಗನ ಮಂಡಲವನ್ನಾವರಿಸಿದ ವಿಷ್ಣುವಿನ ನೀಲಪಾದದಂತೆ ಕವಿಯ ಕಣ್ಣಿಗೆ ಕಾಣಿಸುತ್ತಾನೆ.

[4] ರಾವಣ ಕೈಲಾಸವನ್ನು ಲಂಕೆಗೆ ಹೊತ್ತೊಯ್ಯಲು ಪ್ರಯತ್ನಿಸಿದ್ದ. ಕೈಲಾಸವನ್ನು ಬುಡ ಸಮೇತವಾಗಿ ಮೇಲಕ್ಕೆತ್ತಿದಾಗ ಇಡೀ ಪರ್ವತವೇ ಕಂಪಿಸಿತಂತೆ. ಆಗ ಪಾರ್ವತಿ ಭಯದಿಂದ ಶಿವನನ್ನು ಗಟ್ಟಿಯಾಗಿ

**ದೇವತೆಯರ ಕನ್ನಡಿಯೇ ಆದ ಕೈಲಾಸವದುವೆ ನೋಡು ॥**[1]
**ಬಾನ ಮುಟ್ಟಿ ಕೆಲ ಶಿಖರವೆತ್ತ ಬೆಳಕೊತ್ತಿ ಒಟ್ಟಿದಂತೆ**
**ದಿನವು ಕೂಡಿ ಹಲರಾಶಿಯಾದ ಶಿವನಟ್ಟಹಾಸದಂತೆ ॥**

ಹಿಮಾಲಯ ಪರ್ವತದೊಂದಿಗಿನ ಕೈಲಾಸದ ಜೋಡನ್ನು ಹಿಂದೆ ಆಗಿಹೋದ ರಾವಣನು ಬಿಡಿಸಿದ್ದ! ನೋಡು ಅದುವೆ ದೇವತೆಯರ ಕನ್ನಡಿಯೆ ಆದ ಕೈಲಾಸ. ಅಗೋ ಅಲ್ಲಿ ಕೆಲ ಶಿಖರಗಳು ಎತ್ತಿ, ಬೆಳಕನ್ನು ಒತ್ತಿ ಒಟ್ಟಿದಂತೆ ಬಾನನ್ನು ಮುಟ್ಟಿವೆ! ಅವು ಸೂರ್ಯನು ಬೆಳಗುವ ಹಗಲುಗಳು ಕೂಡಿ ಹಲವು ರಾಶಿಯಾಗಿ ಶಿವನ ಅಟ್ಟಹಾಸದಂತೆ ಬೆಳಗುತ್ತಿವೆ!

59

**ಎಣ್ಣೆಗಲಸು ಕಾಡಿಗೆಯ ಬಣ್ಣದವ ನೀನು ನಗದ ತುದಿಗೆ**
**ಕೋರೆ ಹಲ್ಲಗೆರೆಯಂತೆ ಕೊರೆದ ಕೈಲಾಸ ಕೀಳು ಬದಿಗೆ ॥**
**ಚಿತ್ತ-ಚಿತ್ರಪಟದಲ್ಲೆ ಬಲ್ಲೆ ನೀನಲ್ಲಿ ಹೇಗೆ ಕಾಂಬೆ**
**ಹೆಗಲಿನತ್ತ ಬಲಭದ್ರ ಹೊತ್ತ ಕಂಬಳಿಯೊ ಏನೊ ಎಂಬೆ ॥**[2]

ನೀನು ಎಣ್ಣೆಗಲಸು ಕಾಡಿಗೆಯ ಬಣ್ಣದವನು. ಆ ಕೈಲಾಸ ಪರ್ವತದ ತುದಿಗೆ ವಿರೂಪದ ನೇಗಿಲ ಗೆರೆಯಂತೆ ಕೊರೆದಿರುವುದನ್ನು ತೆಗೆದು ಹಾಕು. ಓಹ್, ಮನೋಹರ ಗೆಳೆಯನೇ, ನಾನು ನನ್ನ ಚಿತ್ತದ ಚಿತ್ರಪಟದಲ್ಲಿಯೇ-ನೀನು ಅಲ್ಲಿ ಹೇಗೆ ಕಾಣುವೆ ಎಂಬುದನ್ನು ತಿಳಿಯಬಲ್ಲೆ. ಬಲರಾಮನು ಹೆಗಲಿನಲ್ಲಿ ಹೊತ್ತ ಕಂಬಳಿಯೋ ಎನ್ನುವಂತೆ ನೀನು ಕಾಣುವೆ.

60

**ತೋಳ ಹಾವ ಬಿಚ್ಚಿಟ್ಟು ಸತಿಗೆ ಕೈಗೊಟ್ಟು, ಕಾಲನಡಿಗೆ**
**ಲೀಲೆಯೆನಲು ಶಿವ, ಬೆಟ್ಟವೊತ್ತಬಹುದಾಗ ಗೌರಿಯಡಿಗೆ ॥**
**ಮೇಘ, ಮೈಯನೊಟ್ಟಯಿಸಿಕೊಂಡು ಘನದಟ್ಟ ಒಟ್ಟಿಲಾಗಿ**
**ಶಿವನ ಸತಿಯ ಪದತಲಕೆ ಎರಗು ಮಣಿತಟಕೆ[3] ಮೆಟ್ಟಿಲಾಗಿ ॥**

---

ತಬ್ಬಿ ಹಿಡಿದಳು. ಅವಳ ಭಯವನ್ನು ಹೋಗಲಾಡಿಸಲು ಶಿವ ತನ್ನ ಕಾಲಿನಿಂದ ಪರ್ವತವನ್ನು ಒತ್ತಿದ. ರಾವಣ ಶಿವನ ಪಾದ ಭಾರವನ್ನು ಹೊರಲಾರದೆ ಪರ್ವತದ ಅಡಿಯಲ್ಲಿ ನಜ್ಜುಗುಜ್ಜಾಗಿ ಹೋಗುತ್ತಿದ್ದ, ಸ್ವಲ್ಪದರಲ್ಲೇ ಪಾರಾದ. ಕೊನೆಗೆ ಶಿವನನ್ನು ಸ್ತುತಿಸಿ ಅವನ ಕೋಪವನ್ನು ಶಮನ ಮಾಡಿದ.

[1] ಆಕಾಶದಲ್ಲಿ ಸಂಚರಿಸುವ ದೇವತೆಗಳ ಪಾಲಿಗೆ ಕೈಲಾಸ ಕನ್ನಡಿಯಾಗಿದೆ. ಅಲ್ಲಿಂದಲೇ ಅವರು ತಮ್ಮ ಮುಖ ನೋಡಿಕೊಳ್ಳುತ್ತಾರೆ.

[2] ಬಿಳಿಯ ಬೆಟ್ಟವನ್ನು ಕರಿಯ ಮೋಡ ಆವರಿಸಿದಾಗ ಬಿಳಿಯ ಚರ್ಮದ ಬಲರಾಮ ಕರಿಯ ಕಂಬಳಿ ಹೊದ್ದಂತೆ ಕಾಣಿಸುತ್ತದೆ. ಕವಿ ಇಲ್ಲಿ ಬಲರಾಮನನ್ನು ಕೈಲಾಸಕ್ಕೆ ಹೋಲಿಸುತ್ತಿದ್ದಾನೆ. ಇದರಿಂದ ಬಲರಾಮ ಅಗಾಧ ಗಾತ್ರದ ಶರೀರ ಹೊಂದಿದ್ದ ಎಂಬುದು ತಿಳಿಯುತ್ತದೆ.

[3] ಕೈಲಾಸದ ನೆಲವನ್ನು ಮುತ್ತು ರತ್ನ, ವಜ್ರ ವೈಢೂರ್ಯಗಳಿಂದ ಮಾಡಲಾಗಿದೆ.

ಶಿವನು ತೋಳಿಗೆ ಸುತ್ತಿಕೊಂಡಿದ್ದ ಹಾವನ್ನು ಬಿಚ್ಚಿಟ್ಟು, ಸತಿಯ ಕೈಗೆ ಕೊಟ್ಟು ಕಾಲನಡಿಗೆಯಲ್ಲಿಯೇ ಲೀಲೆ ಎಂಬಂತೆ ನಡೆಯುತ್ತಾನೆ. ಮೇಘವೇ, ಆ ಸಮಯದಲ್ಲಿ ನೀನು ಘನಗೊಂಡು ಮೈಯನ್ನು ಒಟ್ಟುಗೂಡಿಸಿಕೋ ಅಮೂಲ್ಯ ಚಿಂತಾಮಣಿ ಪ್ರದೇಶವಾದ ಕೈಲಾಸದ ನೆಲದಲ್ಲಿ ಶಿವನ ಸತಿಯ ಪಾದಕ್ಕೆ ಮೆಟ್ಟಿಲಾಗಿಸಿಕೋ.

61

**ಬಳೆಯ ಚುಚ್ಚಿ, ಮಳೆ ಸುರಿಯ ಹಚ್ಚಿ, ಕೆಳಗಿಚ್ಚೆಯಂತೆ ಮೆಚ್ಚಿ**
**ದಿವ್ಯ ಯುವತಿಯರು ಜಳಕ ಮಾಡೆ ಮಾಡ್ಯಾರು ಮೋಡ ಕೆಚ್ಚಿ ॥**
**ಮೋಕ್ಷ ಕೊಡರು ದುಡಿಸುವರು ದಣಿಯೆ, ಬಲು ಮೆತ್ತನವನ ಕಂಡು**
**ಆಟಕಾಗಿ ಗದ್ದರಿಸಿ ಒಮ್ಮೆ ನಡೆ ನಿನ್ನ ಬಿಡಿಸಿಕೊಂಡು ॥**

ಮಧುರ ನೇಹಿಗನೇ, ನೀನು ಮೆತ್ತನೆಯವನು, ಅದನ್ನು ಕಂಡು ದಿವ್ಯ ಯುವತಿಯರು ನಿನಗೆ ಬಳೆಯಿಂದ ಚುಚ್ಚಿ ಮಳೆ ಸುರಿಯ ಹಚ್ಚುವರು. ಕೆಳಗೆ ಅವರ ಇಚ್ಛೆಯಂತೆ ನಿನ್ನನ್ನು ಮೆಚ್ಚುವರು. ನಿನ್ನನ್ನು ಹೊಂದಿಸಿಕೊಂಡು ಸ್ನಾನ ಮಾಡುತ್ತಲೇ ಇರುವರು. ನಿನಗೆ ಬಿಡುಗಡೆ ಕೊಡದೆ, ನೀನು ದಣಿಯುವಂತೆ ದುಡಿಸುವರು. ನೀನು ಆಟಕ್ಕಾಗಿ ಗದ್ದರಿಸುವಂತೆ ಮಾಡಿ ಅವರಿಂದ ಬಿಡಿಸಿಕೊಂಡು ಮುಂದಕ್ಕೆನಡೆ.

62

**ಚಿನ್ನ ಹೊನ್ನ ತಾವರೆಯ ಪಡೆವ ಮಾನಸದ ನೀರು ಕುಡಿಯೈ[1]**
**ನೀರ ಕುಡಿಯುತಿರೆ ಬಟ್ಟೆಮುಸುಕು ಐರಾವತಕ್ಕೆ ಹಿಡಿಯೈ ॥**
**ಕಲ್ಪವೃಕ್ಷಗಳ ಚಿಗುರು ಎಲೆಯ ತೂರಾಡು ತಾರು ಮಾರು**
**ಗೆಳೆಯನಲ್ಲಿ ಬಂದಿರುವೆ ಇಲ್ಲಿ ನಿನ್ನಾಟ ತಡೆವರಾರು ॥**

ಚೆಲುವಾದ ಹೊನ್ನ ತಾವರೆಯನ್ನು ಹೊಂದಿದ ಮಾನಸ ಸರೋವರದ ನೀರನ್ನು ಕುಡಿ. ನೀರು ಕುಡಿಯುತ್ತಿರುವಾಗಲೇ ಬಟ್ಟೆ ಮುಸುಕನ್ನು ಐರಾವತಕ್ಕೆ ಹಿಡಿ. ಕಲ್ಪವೃಕ್ಷಗಳ ಚಿಗುರು ಎಲೆಯನ್ನು ಚೆಲ್ಲಾಪಿಲ್ಲಿಯಾಗಿ ತೂರಾಡು. ಇಲ್ಲಿ ಗೆಳೆಯನಲ್ಲಿಗೆ ಬಂದಿರುವೆ. ಹಾಗಾಗಿ ನಿನ್ನ ಆಟವನ್ನು ತಡೆಯುವವರು ಯಾರು?

63

**ಪ್ರಿಯನ ತೊಡೆಗೆ ಹರಿದಿರುವ ಸೇಲೆಯೆನೆ ಗಂಗೆ ಅಲ್ಲಿ ಹರಿಯೆ**
**ಮೋಡ ಮುತ್ತು ಮುಡಿದಲ್ಲಿ ಮಾಡ ರಮಣಿಯರ ತೆರದಿ ಮೆರೆಯೆ ॥**
**ಹೋಗು ನೋಡು ಒಂದೊಂದು ಸಲಕೆ ಈ ಅಲಕೆಯಂದ ಬೇರೆ[2]**

---

[1] ಮಾನಸ ಸರೋವರದಲ್ಲಿ ಚಿನ್ನದ ತಾವರೆಗಳು ಅರಳುತ್ತವೆ ಎಂಬುದು ಕವಿಸಮಯ

[2] ಅಲಕಾ ಪಟ್ಟಣವು ಕೈಲಾಸದ ಮಡಿಲಲ್ಲಿ ಕುಳಿತಿದೆ. ತನ್ನ ಪ್ರಿಯನಾದ ಕೈಲಾಸದ ತೊಡೆಯ ಮೇಲೆ ಕುಳಿತ ಪ್ರಿಯತಮೆಯಂತೆ ಕಂಗೊಳಿಸುತ್ತಿದೆ. ಅಲ್ಲಿ ನಿನ್ನ ಮಳೆಹನಿ ಮೋಹದ ಮುತ್ತು ಮುಡಿದ ರಮಣಿಯರನ್ನು ಹೋಲುತ್ತದೆ.

### ಕಣ್ಣುಮುಟ್ಟೆ ಇನ್ನೊಮ್ಮೆ ಕಾಣದೇ ಕಂಡೆ ಎನ್ನಲಾರೆ[1]

ಗಂಗೆಯು ಅಲ್ಲಿ ಪ್ರಿಯಶಿವನ ತೊಡೆಗೆ ಹರಿದಿರುವ ವಸ್ತ್ರ ಎನ್ನುವಂತೆ ಹರಿಯುತ್ತಿರುವಳು. ಹೇ ರಸಿಕ ಮೋಡವೇ, ರಮಣಿಯರ ರೀತಿಯಲ್ಲಿ ಶೋಭಿಸುವಂತೆ ಮುತ್ತುಗಳನ್ನು ಮುಡಿದು ಹೋಗು. ವಿಲಾಸದಿಂದ ಕಂಗೊಳಿಸುವ ಅಲಕೆ(ಯಕ್ಷನ ಮಡದಿ ಇರುವ ಸ್ಥಳ)ಯನ್ನು ನೋಡು. ಒಂದೊಂದು ಸಲಕ್ಕೂ ಅಲಕೆಯ ಅಂದ ಬೇರೆ ಬೇರೆ. ಒಮ್ಮೆ ಕಣ್ಣು ನೋಡಿ ಸ್ಪರ್ಶಿಸಿದಂತೆ ಆನಂದಿಸಿರಲು ಇನ್ನೊಮ್ಮೆ ಅದನ್ನೇ ಕಂಡೆ ಎಂದು ಹೇಳಲಾರೆ.



[1] ಮೂಲ ಪದ್ಯವು ಅನುವಾದದ ಮೂರನೆಯ ಸಾಲಿಗೇ ಪೂರ್ಣವಾಗಿಬಿಡುತ್ತದೆ. ಈ ನಾಲ್ಕನೆಯ ಸಾಲನ್ನು ಬೇಂದ್ರೆ ಹೆಚ್ಚುವರಿಯಾಗಿ ಸೇರಿಸಿದ್ದಾರೆ. ಇದು ಮೂಲದಲ್ಲಿಲ್ಲ.

# ಪೂರ್ವ ಮೇಘದ ಸಾರ

ಒಬ್ಬ ಯಕ್ಷ ತನ್ನ ಒಡೆಯನಿಂದಾಗಿ ತನ್ನ ನಲ್ಲೆಯಿಂದ ಬೇರ್ಪಟ್ಟು ಒಂದು ವರ್ಷಗಳ ಅವಧಿಯ ಶಾಪಗ್ರಸ್ತ ದಿವಸಗಳನ್ನು ಕಳೆಯಬೇಕಾಯಿತು. ಈ ಶಾಪಗ್ರಸ್ತ ದಿವಸಗಳನ್ನು ಅವನು ವಿಂಧ್ಯ ಪರ್ವತದ ತಪ್ಪಲಲ್ಲಿದ್ದ ರಾಮಗಿರಿಯಲ್ಲಿ ಕಳೆದ. ಎಂಟು ತಿಂಗಳ ಏಕಾಂತದ ಅವಧಿಯನ್ನು ಪೂರೈಸಿದ ಮೇಲೆ ಒಂದು ದಿವಸ ಬೆಟ್ಟವೊಂದರ ತುದಿಯಲ್ಲಿ ಆನೆಯ ಗಾತ್ರದ ಒಂದು ದೊಡ್ಡ ಮೋಡವನ್ನು ಕಂಡ. ಅದು ಉತ್ತರದತ್ತ, ತನ್ನ ಮನೆ ಇರುವ ಅಲಕೆಯ ದಿಕ್ಕಿಗೆ ಪಯಣಿಸುತ್ತದೆ ಎಂದು ತಿಳಿದ ಮೇಲೆ ಅದನ್ನು ತನ್ನ ಸಂದೇಶ ವಾಹಕವನ್ನಾಗಿ ಮಾಡಿಕೊಳ್ಳಬೇಕೆಂದು ನಿರ್ಧರಿಸಿದ. ಅದನ್ನು ಅಲಕೆಗೆ ಕಳಿಸಿ ತನ್ನ ಮಡದಿಗೆ ತನ್ನ ಕ್ಷೇಮಸಮಾಚಾರವನ್ನು ತಲುಪಿಸುವ ಅವಕಾಶ ಸಿಕ್ಕಿತೆಂದು ಅವನಿಗೆ ಸಂತೋಷವಾಯಿತು. ಸಾಲದೆಂದು ಶುಭ ಶಕುನಗಳೂ ಕಾಣಿಸಿದವು. ಅವನು ಮೋಡವನ್ನು ಸಂಪರ್ಕಿಸಿ ಹಿಮಾಲಯದಲ್ಲಿದ್ದ ಯಕ್ಷ ನಗರಿ ಅಲಕೆಯನ್ನು ತಲುಪುವ ಮಾರ್ಗವನ್ನು ಅದಕ್ಕೆ ವಿವರಿಸಲು ಪ್ರಾರಂಭಿಸಿದ.

ಮೋಡವು ಹಂಸಪಕ್ಷಿಗಳು ಹಾರಿ ತಲುಪಲು ಬಯಸುವ ಮಾನಸ ಸರೋವರದತ್ತ ಸಾಗುವ ಮುನ್ನ ಆಮ್ರಕೂಟವನ್ನು ತಲುಪಬೇಕು, ಅಲ್ಲಿ ಸ್ವಲ್ಪ ವಿಶ್ರಾಂತಿ ಪಡೆದು ಅಲ್ಲಿನ ದಟ್ಟವಾದ ಮಾವಿನ ತೋಪಿನ ಮೇಲೆ ತನ್ನ ಕಪ್ಪುವರ್ಣದ ಪ್ರಭೆಯನ್ನು ಬೀರಬೇಕು. ಅಲ್ಲಿಂದ ಹಾರಿ ಅದು ವಿಂಧ್ಯ ಪರ್ವತದಲ್ಲಿ ಹುಟ್ಟಿ ನೇರಳೆ ಮರಗಳ ನಡುವೆ ಹರಿಯುವ ನರ್ಮದಾ ನದಿಯನ್ನು ನೋಡಬೇಕು. ಅಲ್ಲಿಂದ ಮುಂದೆ ಸಾಗಿ ಕಾಳ್ಗಿಚ್ಚನ್ನು ಆರಿಸಿ ಮಳೆ ಸುರಿಸಬೇಕು. ಕದಂಬ ವೃಕ್ಷದಲ್ಲಿ ಹೂಮೊಗ್ಗುಗಳು ಅರಳಿ ಸುಗಂಧವನ್ನ ಹೊರಸೂಸುತ್ತವೆ. ಅಲ್ಲಿಂದ ಮುಂದಕ್ಕೆ ಹೋದರೆ ಹಂಸಗಳ ನೆಲೆಯಾದ ದಶಾರ್ಣ ಪ್ರಾಂತ್ಯ ಸಿಗುತ್ತದೆ. ಅಲ್ಲಿ ಕೇತಕಿ ವನವಿದೆ, ಹಕ್ಕಿಗಳ ಚಿಲಿಪಿಲಿ ಸದ್ದಿದೆ ಊರಾಚೆ ನೇರಳೆ ವನವಿದೆ. ಅದರ ರಾಜಧಾನಿ ವಿದಿಶಾಗೆ ಭೇಟಿ ನೀಡಿ, ಅಲ್ಲಿ ಹರಿಯುವ ವೇತ್ರವತಿ ನೀರನ್ನು ಕುಡಿದು ನೀಚಾಚಲದಲ್ಲಿ ವಿರಮಿಸಬೇಕು. ಬಳಿಕ ತೆಳ್ಳಗೆ ಹರಿಯುವ ನಿರ್ವಿಂಧ್ಯೆಯನ್ನು ಸಮೃದ್ಧವಾಗಿ ಹರಿಯಿಸಿ ಉಜ್ಜಯಿನಿಯನ್ನು ತಲುಪಬೇಕು.

ಉಜ್ಜಯಿನಿಯಲ್ಲಿ ಶಿವನ ಮಂದಿರವಿದೆ. ಗಂಧವತಿ ನದಿ ಇದೆ. ಉಜ್ಜಯಿನಿಯ ಹೆಣ್ಣುಮಕ್ಕಳ ಜಲಕ್ರೀಡೆಯಿಂದಾಗಿ ಅವರ ಶರೀರದ ಕಂಪು ನದಿಯಲ್ಲೂ ತುಂಬಿರುವ ಕಾರಣ ಆ ಹೆಸರು ಗಂಧವತಿಗೆ ಅನ್ವರ್ಥವೂ ಹೌದು. ಮೋಡದ ಮೊದಲ ಹನಿಗಳಿಂದ ಅಲ್ಲಿನ ದೇವದಾಸಿಯರು ಸಂತೃಪ್ತರಾಗುವರು. ರಾತ್ರಿ ಉಜ್ಜಯಿನಿಯಲ್ಲಿ ಕಳೆದು ಮಾರನೆಯ ದಿವಸ ಗಂಭೀರಾ ನದಿಯತ್ತ ತೆರಳಬೇಕು, ಅಲ್ಲಿಂದ ಸ್ಕಂದನ ಆವಾಸ ಸ್ಥಾನವಾದ ದೇವಗಿರಿಗೆ ಹೋಗಬೇಕು ಎಂದು ಸೂಚಿಸುತ್ತಾನೆ. ಅಲ್ಲಿ ಸ್ಕಂದನಿಗೆ ಅಭಿಷೇಕ ಮಾಡಿ ಚರ್ಮಣ್ವತೀ ನದಿಗೆ ಪಯಣಿಸಬೇಕು. ಚರ್ಮಣ್ವತೀ ನದಿಯಿಂದಾಚೆಗೆ ದಶಪುರವೆಂಬ ಪ್ರಾಂತ್ಯವಿದೆ. ಈ ಭಾಗದಲ್ಲಿ ಕಾಳಿದಾಸ ದಶಪುರದ ಹೆಣ್ಣುಗಳನ್ನು ಹೊಗಳುತ್ತಾನೆ. ಇಲ್ಲಿಂದ ಹೊರಟ ಮೇಲೆ ಪಾಂಡವ ಕೌರವರ ರಣರಂಗವಾದ ಕುರುಕ್ಷೇತ್ರ ಸಿಗುತ್ತದೆ. ಈ ರಣರಂಗದಲ್ಲಿ ಅರ್ಜುನ ಶತ್ರುಸೈನಿಕರ ತಲೆಗಳನ್ನು ಚೆಂಡಾಡಿದ್ದ. ಅಲ್ಲಿ ಹರಿಯುವ ಸರಸ್ವತೀ ನದಿಯ ನೀರನ್ನು ಕುಡಿದು ಗಂಗೆ ಹರಿಯುವ ಜಾಗದತ್ತ ಪಯಣಿಸಬೇಕು. ಇಲ್ಲಿ ಗಂಗೆ ತನ್ನ ಬೆಳ್ನೊರೆಗಳೊಂದಿಗೆ ನಸುನಗುತ್ತ ಸ್ವರ್ಗದಿಂದ ಶಿವನ ಮುಡಿಯ ಮೇಲೆ ಧುಮುಕಿದ್ದಳು.

ಅಲ್ಲಿಂದಾಚೆಗೆ ಹಿಮಾಲಯದ ಶಿಖರಗಳಲ್ಲಿ ಸ್ವಲ್ಪ ವಿಶ್ರಮಿಸಬೇಕೆಂದು ಮೋಡನಿಗೆ ಸೂಚಿಸುತ್ತಾನೆ. ಹಿಮಾಲಯದ ಕಲ್ಲು ಬಂಡೆಗಳು ಕಸ್ತೂರಿ ಮೃಗದ ಸುವಾಸನೆ ಹೊರಸೂಸುತ್ತದೆ. ಹಿಮಾಲಯದ ಬಿದಿರಿನ ಮೆಳೆ ಬೀಸುವ ಗಾಳಿಗೆ ಸಂಗೀತದ ನಾದವನ್ನು ನೀಡುತ್ತದೆ. ಇಲ್ಲಿನ ಕಿನ್ನರ ಸ್ತ್ರೀಯರು ತಮ್ಮ ಇಂಪಾದ ಕಂಠದಿಂದ ಶಿವನ ಸ್ತೋತ್ರ ಮಾಡುತ್ತಾರೆ. ಮೋಡವು ಇಲ್ಲಿಂದ ಉತ್ತರಕ್ಕೆ ಸಾಗಿ ಕ್ರೌಂಚರಂಧ್ರವನ್ನು ತಲುಪಬೇಕು. ಕ್ರೌಂಚ ರಂಧ್ರದಿಂದ ಮುಂದಕ್ಕೆ ಬಂದರೆ ಶಿವನ ಪವಿತ್ರ ಆವಾಸ ಸ್ಥಾನವಾದ ಕೈಲಾಸ ಪರ್ವತ ಸಿಗುತ್ತದೆ. ಆ ಪರ್ವತದ ಮೇಲ್ಭಾಗದಲ್ಲಿ ಅಲಕಾ ಪಟ್ಟಣವಿದೆ.



ನಿರ್ವರ್ತಸ್ವ ಹೃದಯಂ ತಪ್ಯತೇ ಮೇ ॥ ಋಗ್ವೇದ 10.95.17
(ನನ್ನ ಕಡೆಗೆ ತಿರುಗಿ ನೋಡು, ನನ್ನ ಹೃದಯ ತಪಿಸುತ್ತಿದೆ)

1

**ಮಿಂಚನುಳ್ಳ ಎಳೆವೆಂಡಿರುಳ್ಳ,[1] ಮಳೆಬಿಲ್ಲ ಬಣ್ಣ ತಾಳಿ[2]**
**ಹಾಡಿಗಾಗಿ ಗುಡುಗುಡುಗಿದಂತೆ ಮದ್ದಳೆಯ ಸೊಲ್ಲ ಹೇಳಿ ॥[3]**
**ಮುಗಿಲ ಮುಟ್ಟ ಕರುಮಾಡ ಮುತ್ತು ರತುನಗಳ ನೀರು ತುಂಬಿ[4]**
**ಇಹವು ಇಂಥ ಮಹಮನೆಗಳಲ್ಲಿ ಅವು ನಿನಗೆ ಸಾಟಿ ಎಂಬಿ ॥[5]**

ಯಕ್ಷನು ತನ್ನ ಆಂತರ್ಯದ ಕವಿಭಾವದಿಂದ ನಿಧಾನವಾಗಿ ಬಿಡುಗಡೆಗೊಂಡನು. ಆಗಸ ಮುಖಿಯಾಗಿ ಹರ್ಷಚಿತ್ತದಿಂದ ಮೇಘವನ್ನು ಕಂಡನು. ಅದಕ್ಕೆ ತನ್ನ ಸುಖದ ನೆಲೆ ಅಲಕೆಯನ್ನು ಹೀಗೆ ವರ್ಣಿಸಿದನು:

ಅಲಕೆಯ ಭವ್ಯವಾದ ಸೌಧಗಳಲ್ಲಿ ಮಿಂಚಿನಂತಹ ಎಳೆ ಹೆಂಡಿರು ಇರುವರು! ಅವು ಮಳೆಬಿಲ್ಲಿನ ಸಪ್ತವರ್ಣಗಳನ್ನು ಹೊಂದಿ ರಂಗಾಗಿವೆ! ಅಲ್ಲಿ ಹಾಡಿಗಾಗಿ ಗುಡುಗುಡುಗಿದಂತೆ ಮದ್ದಳೆಯ ಸೊಲ್ಲು ಇದೆ. ಆ ಮುಗಿಲು ಮುಟ್ಟುವ ಉಪ್ಪರಿಗೆಗಳು ಮುತ್ತು ರತ್ನಗಳ ಕಾಂತಿಯಿಂದ ತುಂಬಿ ಶೋಭಿಸುತ್ತಿವೆ. ಇಂತಹ ಮನೆಗಳು ನಿನಗೆ ಸಾಟಿ ಎಂಬಂತೆ ಅಲ್ಲವೇ!

---

[1] ನಿನ್ನಲ್ಲಿ ಮಿಂಚಿದೆ. ಅಲಕೆಯ ಮಾಳಿಗೆಗಳಲ್ಲಿ ಮಿಂಚಿನಂತೆ ಹೊಳೆಯುವ ಎಳೆಯ ಹೆಣ್ಣುಗಳಿದ್ದಾರೆ.

[2] ನಿನ್ನಲ್ಲಿ ಬಣ್ಣ ಬಣ್ಣದ ಕಾಮನಬಿಲ್ಲಿದೆ, ಅಲಕೆಯಲ್ಲಿ ವರ್ಣಮಯವಾದ ಸೌಧಗಳಿವೆ

[3] ನಿನ್ನಲ್ಲಿ ಗುಡುಗಿನ ಸದ್ದಿದೆ, ಸಂಗೀತವನ್ನು ಪ್ರೀತಿಸುವ ಅಲಕೆಯಲ್ಲಿ ಮದ್ದಳೆಯ ಸೊಲ್ಲಿದೆ.

[4] ನಿನ್ನಲ್ಲಿ ತಂಪಾದ ನೀರಿನ ಅಂಶವಿದೆ; ಅಲಕೆಯ ಉಪ್ಪರಿಗೆಗಳು ಮುತ್ತು ರತ್ನಗಳಿಂದ ಅಲಂಕೃತಗೊಂಡು ನೀರಿನಂತೆಯೇ ತಂಪಾದ ಅನುಭವ ನೀಡುತ್ತವೆ.

[5] ಹೀಗೆ ಅಲಕೆ ನಿನಗೆ ಹೋಲುವ, ನಿನಗೆ ಸರಿಸಾಟಿಯಾದ ಪಟ್ಟಣವಾಗಿದೆ.

2

**ಮಾಟ ತಾವರೆಯು ಕೈಗೆ,[1] ಕುರುಳಿನಲಿ ಬಾಲಕುಂದ ಮಾಲೆ,[2]**
**ಲೋಧ್ರ ಪುಷ್ಪಗಳ ಸೂಸು ಹುಡಿಯು ಚೆಲುವಾದ ಮೊಗದ ಮೇಲೆ ||[3]**
**ಚೆಂದ ಕುರುವಕವು ಹೆಳಲಿನಲ್ಲಿ,[4] ಸಿರಿಸಲವು ಕಿವಿಯ ಬಳಿಗೆ[5]**
**ಬೈತಲಲ್ಲಿ ಕಡವಾಲ ಹೂವು ಅಲ್ಲಿರುವ ಹೆಣ್ಣುಗಳಿಗೆ ||[6]**

ಅಲ್ಲಿರುವ ಹೆಣ್ಣುಗಳ ಕೈಯಲ್ಲಿ ಮಾಟವಾದ ತಾವರೆ ಹೂವಿದೆ. ಅವರ ಮುಂಗುರುಳಲ್ಲಿ ಬಾಲಕುಂದದ ಮಾಲೆ ಇದೆ. ಅವರ ಚೆಲುವಾದ ಮುಖದ ಮೇಲೆ ಮಧೂಕವೆಂಬ ಮರದ ಲೋದ್ರಪುಷ್ಪಗಳು ಹುಡಿಸೂಸಿ ಮುಖವನ್ನು ಕೆಂಪಾಗಿಸಿವೆ. ಅವರ ಸುಂದರವಾಗಿ ಹೆಣೆದ ಜಡೆಯಲ್ಲಿ ಮದರಂಗಿ ಗಿಡದ ಚೆಂದವಾದ ಕೆಂಪು ಹೂವುಗಳಿವೆ. ಅವರ ಕಿವಿಯ ಬಳಿ ಸಿರೀಶ ಮರದ ಮನೋಹರ ಹೂವುಗಳಿವೆ. ಅವರ ಬೈತಲಲ್ಲಿ ಕಂಪು ಸೂಸುವ ಕದಂಬ ವೃಕ್ಷದ ಕೇಸರಿ ಬಣ್ಣದ ಹೂಗಳು ಕಂಗೊಳಿಸಿವೆ.

3

**ಯಕ್ಷರಲ್ಲಿ ಬಿಳಿ ಹರಳಿನಿಂದ ರಚಿಸಿರುವ ಸೌಧಗಳಲಿ,[7]**
**ಚುಕ್ಕಿ ನೆರಳೆ ಅರಳಾಗಿ ಹಾಸೆ, ನಲುವೆಣ್ಣ ತೋಳುಗಳಲಿ ||[8]**
**ನಿನ್ನ ಗುಡುಗಿನೊಡಗೂಡಿ ನುಡಿಸುವರು ವಾದ್ಯವಾದ್ಯವಾಗಿ[9]**
**ಬಯಕೆ-ತಾಳೆ-ಹಾಲನ್ನು ಕುಡಿವರೋ ಕಾಮಕೇಳಿಗಾಗಿ ||[10]**

---

[1] ಈ ಲೋಕದಲ್ಲಿ ನಾನಾ ಬಗೆಯ ಹೂವುಗಳು ನಾನಾ ಕಾಲಮಾನಗಳಲ್ಲಿ ಅರಳುತ್ತವೆ. ಆದರೆ ಅಲಕೆಯಲ್ಲಿ ಎಲ್ಲ ಜಾತಿಯ ಹೂವುಗಳೂ ಎಲ್ಲ ಕಾಲದಲ್ಲೂ ಕಾಣಸಿಗುತ್ತವೆ. ಅದು ಹೇಗೆಂದರೆ:

[2] ಶರದೃತುವಿನಲ್ಲಿ ಅರಳುವ ಕಮಲಗಳ ಸೌಂದರ್ಯ ಆ ಹೆಣ್ಣುಗಳ ಕೈಗಳಲ್ಲಿ ಯಾವಾಗಲೂ ಕಾಣಿಸುತ್ತದೆ.

[3] ಅವರ ಕೂದಲು ಪುಟ್ಟ ನೈದಿಲೆ ಮೊಗ್ಗಿನ ಮಾಲೆಯಂತೆ ಕಾಣಿಸುತ್ತದೆ.

[4] ಅವರ ಮುಖದ ಮೇಲೆ ಲೋಧ್ರ ಪುಷ್ಪಗಳ ಹುಡಿ ಕಾಣಿಸುತ್ತದೆ.

[5] ಜಡೆಯಲ್ಲಿ ಕುರುವಕ ಹೂವಿನ ಸೌಂದರ್ಯವಿದೆ. ಸುಂದರವಾದ ಹುಡುಗಿಯರು ತಬ್ಬಿಕೊಂಡಾಗ ಕುರುವಕ ಬಳ್ಳಿಯಲ್ಲಿ ಹೂಬಿಡುತ್ತದೆ ಎಂಬ ಕವಿಸಮಯವಿದೆ.

[6] ಕಿವಿಗಳು ಸಿರೀಶ ಪುಷ್ಪವನ್ನು ಹೋಲುತ್ತದೆ. ಸಿರೀಶವು ಅತ್ಯಂತ ಮೃದುವಾದ ಹೂವಾಗಿದ್ದು ಕಿವಿಯ ಅಲಂಕಾರಕ್ಕೆಂದೇ ಇದನ್ನು ಉಪಯೋಗಿಸಲಾಗುತ್ತದೆ.

[7] ನಿನ್ನಂತೆಯೇ ಅವರು ಗಗನದ ನಕ್ಷತ್ರಗಳಿಗೆ ಹತ್ತಿರವಾದವರು. ಅವರ ಮಾಳಿಗೆಗಳು ಬಿಳಿಯ ಹರಳುಗಳಿಂದ ರಚಿತವಾಗಿದೆ.

[8] ಮಾಳಿಗೆಯ ಆ ನವಿರಾದ ನೆಲದ ಮೇಲೆ ನಕ್ಷತ್ರಗಳ ಪ್ರತಿಬಿಂಬ ಮೂಡಿಸುತ್ತದೆ. ಆ ಬಿಳಿ ಹರಳಿನ ನೆಲದ ಮೇಲೆ ನಕ್ಷತ್ರಗಳ ಪ್ರತಿಬಿಂಬ ನೆಲಕ್ಕೆಲ್ಲ ಹೂವಿನ ಅಲಂಕಾರ ಮಾಡಿದಂತೆ ಭಾಸವಾಗುತ್ತದೆ.

[9] ಅವರ ವಾದ್ಯಗಳು ನಿನ್ನ ಗುಡುಗಿನ ಸದ್ದನ್ನೇ ಹೋಲುತ್ತವೆ.

[10] ಯಕ್ಷರು ಬಯಕೆಯನ್ನು ಹೆಚ್ಚಿಸಿಕೊಳ್ಳುವ ಸಲುವಾಗಿ 'ರಸಫಲ' ಎಂಬ ಮದಿರೆಯನ್ನು ಕುಡಿಯುತ್ತಾರೆ

ಅಲ್ಲಿ ಬಿಳಿಹರಳಿನಿಂದ ರಚಿಸಿರುವ ಸೌಧದಲ್ಲಿ ಚುಕ್ಕೆಯ ನೆರಳೇ ಪುಷ್ಪವಾದಂತಹ ನೆಲದ ಹಾಸಿವೆ! ಆ ಸೊಬಗಿನಲ್ಲಿ ಪ್ರೀತಿಯ ಹಿಗ್ಗಿನ ಹೆಣ್ಣುಗಳ ತೋಳುಗಳಲ್ಲಿ ಯಕ್ಷರಿದ್ದಾರೆ! ನೀನು ಗುಡುಗಿದರೆ ಅವರು ಅದರ ಒಡಗೂಡಿ ವಿವಿಧ ವಾದ್ಯಗಳನ್ನು ನುಡಿಸುವರು! ಕಾಮಕೇಳಿಗಾಗಿ ತಾಳೆಯ ಮರದ ಸಾರಾಯಿ ಕುಡಿಯುವರು!

4

**ನಂದನಂಗಳಲಿ ಗಂಗೆ ಮಿಂದ ತಂಗಾಳಿ ಹಾಯುವಲ್ಲಿ**
**ಅಲ್ಲೆ ತೀರದಲಿ ಬಿಸಿಲ ಮರೆಸಿ ಮಂದಾರ ಛಾಯೆಯಲ್ಲಿ ॥[1]**
**ಹೊನ್ನ ಮಳಲು ಮಣಿ ತೂರಿ ಆಡುವರು[2] ಹುಟ್ಟು ಜವ್ವನಿಯರು**
**ಅಮರರಿಂದ ಪ್ರಾರ್ಥಿತರು ಆಗುವರು ಅಮರ ಕನ್ನಿಕೆಯರು ॥[3]**

ಇಂದ್ರನ ತೋಟ ನಂದನದಲ್ಲಿ ಗಂಗೆಮಿಂದ ತಂಗಾಳಿ ಹಾಯುವ ತೀರದಲ್ಲಿ ದೇವಕನ್ನಿಕೆಯರಿರುವರು. ಅವರು ಅಲ್ಲೇ ಮಂದಾರ ವೃಕ್ಷದ ಛಾಯೆಯಲ್ಲಿ ಬಿಸಿಲಿನಿಂದ ಮರೆಯಾಗಿರುವರು. ಆ ಹುಟ್ಟು ಜವ್ವನೆಯರು ಹೊನ್ನು ಮರಳನ್ನು ಮಣಿಯಾಗಿ ತೂರಿ ಆಟವಾಡುತ್ತಿರುವರು. ಆ ಕನ್ಯೆಯರು ಅಮರರಿಂದ ಪ್ರಾರ್ಥಿತರಾಗುವರು!

5

**ಉಟ್ಟ ರೇಸಿಮೆಯ ನೀರಿ ಸೆಳೆಯೆ ಆತುರದ ಕರಗಳಿಂದಾ**
**ಮತ್ತೆ ಜರೆಯಲಿರೆ ಮೊದಲೆ ಸಡಲಿದಾ ಕಟಿಯ ನೀವಿಬಂಧ ॥[4]**
**ತೊಂಡೆ ತುಟಿಯ ಮರುಳೆಯರು ಪ್ರಿಯರಿದಿರು ನಾಚಿ ಬಳುಕಿ ಬಗ್ಗಿ**
**ರತ್ನದೀಪ ನಂದಿಸಲು ಹವಣಿಪರು ಸುಳ್ಳೆ ಹುಡಿಯ ನುಗ್ಗಿ ॥[5]**

---

ಎಂದು ಕಾಳಿದಾಸ ಬರೆದಿದ್ದಾನೆ. ಬಯಕೆ ಮೇಳೈಸು(ತಾಳೆ)ವಂತೆ ತಾಳೆಯ ಮರದ ಸಾರಾಯಿ ಸವಿದರು ಎಂದು ಬೇಂದ್ರೆ ಬಣ್ಣಿಸಿದ್ದಾರೆ. ('ತಾಳೆ'ಯನ್ನು ಶ್ಲೇಷಾರ್ಥದಲ್ಲಿ ಪ್ರಯೋಗಿಸಿದ್ದಾರೆ.)

[1] ಸ್ವರ್ಗಲೋಕದ ಐದು ಮರಗಳಲ್ಲಿ ಒಂದು ಮಂದಾರ ವೃಕ್ಷ (ಆಪ್ಲುತಾಸ್ತೀರಮಂದಾರಕುಸುಮೋತ್ಕಿರ ವೀಚಿಷು – ಕುಮಾರ ಸಂಭವ 6.5)

[2] ಮಂದಾರ ಮರದ ನೆರಳಿನಲ್ಲಿ ಗಂಗಾ ತೀರದ ಮರಳಿನಲ್ಲಿ ಅಮೂಲ್ಯವಾದ ಮಣಿಗಳನ್ನು ಬಚ್ಚಿಟ್ಟು ಹುಡುಕುವ ಒಂದು ಬಗೆಯ ಆಟ.

[3] ಯಕ್ಷ ಕನ್ನಿಕೆಯರು ಅದೆಷ್ಟು ಚೆಲುವೆಯರು, ಹುಟ್ಟು ಜವ್ವನಿಗರು ಎಂದರೆ ದೇವತೆಗಳೂ ಅವರಲ್ಲಿ ಪ್ರೇಮಭಿಕ್ಷೆ ಯಾಚಿಸುವರು.

[4] ತನ್ನ ಪ್ರಿಯನು ತಾನು ತೊಟ್ಟಿರುವ ರೇಶಿಮೆಯ ಸೀರೆಯನ್ನು ಆತುರದಿಂದ ಸೆಳೆಯುವನು ಎಂದು ಗೊತ್ತಿದ್ದ ಯಕ್ಷಕನ್ನಿಕೆ ಮುಂಚಿತವಾಗಿಯೇ ಸೀರೆಯ ಗಂಟನ್ನು ಸಡಿಲಗೊಳಿಸಿರುತ್ತಾಳೆ.

[5] ಅಮೂಲ್ಯವಾದ ಮಣಿಯ ಪ್ರಭೆಯೇ ಸುತ್ತಲೂ ಬೆಳಕನ್ನು ಸೂಸುತ್ತದೆ. ಪ್ರಿಯನೊಂದಿಗೆ ರತಿಕ್ರೀಡೆಗೆ ತೊಡಗಲಿರುವ ಯಕ್ಷಕನ್ನಿಕೆ ಕತ್ತಲೆಯನ್ನು ಉಂಟು ಮಾಡಿಕೊಳ್ಳಲು ಸುಗಂಧ ದ್ರವ್ಯ(ಪುಡಿ)ಯನ್ನು ಮಣಿಯ ಮೇಲೆ ಹಾಕುತ್ತಾಳೆ. ಆದರೆ ಆ ಮಣಿ ಅದೆಷ್ಟು ಜಾಜ್ವಲ್ಯಮಾನವಾಗಿ ಹೊಳೆಯುತ್ತಿರುತ್ತದೆ ಎಂದರೆ ಸುಗಂಧದ ಪುಡಿ ಎರಚಿ ಮಣಿಯನ್ನು ಮಂಕಾಗಿಸಲು ಆಗುವುದಿಲ್ಲ. ಮಣಿಯ ಬೆಳಕಿನಲ್ಲೇ ಪ್ರಿಯನ ರತಿಕ್ರೀಡೆಯ ಆತುರವನ್ನು ಕಂಡು ತೊಂಡೆ ತುಟಿಯ ಆ ಮರುಳೆಯರು ನಾಚುತ್ತಾರೆ.

ಯಕ್ಷರು ಆ ಅಮರ ಕನ್ನಿಕೆಯರು ಉಟ್ಟ ರೇಶಿಮೆಯ ಸೀರೆಯ ನಿರಿಯನ್ನು ಆತುರದ ಕೈಗಳಿಂದ ಸೆಳೆಯುವರು. ಮೊದಲೇ ಸಡಿಲವಾದ ನೀವಿಬಂಧ ಬಾಳೆಕಾಯಿಗಂಟು, ಹಾಗೆ ಸೆಳೆಯುವಾಗ ಮತ್ತೆ ಜರಿಯುತ್ತದೆ. ಆಗ ತೊಂಡೆ ತುಟಿಯ ಮರುಳೆಯರು ಪ್ರಿಯರ ಎದುರು ನಾಚುವರು. ಅವರು ಸುಳ್ಳು ಸುಳ್ಳೇ ಸುಮ್ಮನೆ ಹುಡಿಯನ್ನು ಎರಚುತ್ತ ರತ್ನದೀಪವನ್ನು ನಂದಿಸಲು ಹವಣಿಸುವಂತೆ ಬಳುಕಿ ನಾಚುವರು.

6

**ಬಿಡದೆ ಬೀಸುವಾ ಗಾಳಿಯೊಡನೆ ಮನೆಯೇಳು ನೆಲೆಯನೇರಿ**
**ಅಲ್ಲಿ ಗೊಂಬೆಗಳನಂದಗೆಡಿಸಿ ಹನಿಯಿಂದ,[1] ಹೆದರಿ ಜಾರಿ ॥**
**ತಪ್ಪಿತಸ್ಥರೆನೆ ಕಂಡಿಯಿಂದ ಹೊರಬೀಳತಾವ ನೂಗಿ[2]**
**ಮರಳಿ ಮೋಡ ತೊಟ್ಟಿಕ್ಕತಾವ ಹರಿ ಹಿಂಜು ಮಂಜು ಆಗಿ ॥[3]**

ಬಿಡದೆ ಬೀಸುವ ಆ ಗಾಳಿಯೊಡನೆ ಮೋಡಗಳು ಏಳು ಹಂತದ ಸೌಧದ ನೆಲೆಯನ್ನು ಏರುತ್ತವೆ. ಅವು ಹನಿಗಳುದುರಿಸಿ ಅಲ್ಲಿಯ ಗೊಂಬೆಗಳ ಅಂದ ಕೆಡಿಸುವವು. ಅನಂತರ ಹೆದರಿ ಜಾರಿ, ತಪ್ಪಿತಸ್ಥ ಎಂಬ ಭಾವದಿಂದ ನುಗ್ಗಿ ಹೊರಬೀಳುವವು. ಮತ್ತೆ ಅವು ಹಿಂಜು ಮಂಜು ಆಗಿ ತೊಟ್ಟಿಕ್ಕುತ್ತ ಹರಿದಾಡುವವು.

7

**ಹೊದ್ದ ಮೋಡ ಹೊರಪಾಗಿ[4] ಬಿದ್ದ ಬೆಳದಿಂಗಳಿಂದ ಕುಸುರಿ**
**ಚಿಕ್ಕಿ ಚಿಕ್ಕಿ ಸುರಿದಂತೆ ಕಿಟಕಿ ತೆರೆ ಚಂದ್ರಕಾಂತ ಒಸರಿ ॥[5]**
**ಪ್ರಿಯರ ತಕ್ಕೆ ತೋಳೊಳಗೆ ಉಸುರು ಬಿಡುತಿರಲು ಹೆಂಗಳೊರಗಿ**
**ಕೂಟದಾಟದಾಸರವ ತಣಿಸುವವು ತಾವೆ ಮರುಗಿ ಕರಗಿ ॥[6]**

---

[1] ಏಳನೆಯ ಅಂತಸ್ತಿನ ಮಾಳಿಗೆಯ ಮೇಲೆ ಯಕ್ಷ ಕನ್ನಿಕೆಯರು ಚಿತ್ರರಚನೆ ಮಾಡಿಟ್ಟಿದ್ದರೆ ಮೋಡಗಳು ಗಾಳಿಯೊಡನೆ ಬಂದು ಚಿತ್ರವನ್ನು ಹಾಳು ಮಾಡುತ್ತವೆ. ಮೋಡದ ಹನಿಗಳಿಂದ ಚಿತ್ರದ ಬಣ್ಣಗಳು ಕಲಸಿ ಹೋಗುತ್ತವೆ.

[2] ಮೋಡಕ್ಕೂ ಹೊಗೆಗೂ ಸಾಮ್ಯವಿದೆ. ಚಿತ್ರವನ್ನು ಹದಗೆಡಿಸಿದ್ದಕ್ಕೆ ತನಗೆ ಇನ್ನೇನು ಕಾದಿದೆಯೋ ಎಂದು ಹೆದರಿ ಮೋಡವು ಹೊಗೆಯ ರೂಪ ತಾಳಿ ಕಿಟಕಿಯಿಂದ ತಪ್ಪಿಸಿಕೊಂಡು ಓಡುತ್ತದೆ.

[3] ಹೊಗೆಯ ವೇಷ ತಳೆದ ಮೋಡ ಕಿಟಕಿಯಿಂದ ಹೊರ ಬಂದ ಮೇಲೆ ಪುನಃ ನಿಜರೂಪ ತಳೆದು ಮಳೆ ಸುರಿಸುತ್ತದೆ.

[4] ಮೋಡಗಳು ಹೊರಟು ಹೋದ ಮೇಲೆ, ಮಳೆ ನಿಂತ ನಂತರ ಉಂಟಾಗುವ ಬೆಳಕು; ಹೊರಪು. ಆಗ ಆಗಸ ಕಾಂತಿಯಿಂದ ಹೊಳೆಯುತ್ತದೆ.

[5] ಚಂದ್ರೋದಯವಾದಾಗ ಚಂದ್ರಕಾಂತ ಶಿಲೆ ಕರಗಿ ನೀರಾಗುತ್ತದೆ ಎಂಬುದು ಕವಿಸಮಯ. ಯಕ್ಷರ ಮಾಳಿಗೆಯ ಜಾಲಂಧ್ರವನ್ನು ಚಂದ್ರಕಾಂತ ಶಿಲೆಯಿಂದ ಮಾಡಿರುತ್ತಾರೆ. ಮೋಡ ಪಕ್ಕಕ್ಕೆ ಸರಿದು ಆ ಜಾಲಂಧ್ರದ ಮೇಲೆ ಬೆಳದಿಂಗಳು ಬಿದ್ದಾಗ ಮಾಳಿಗೆಯ ಚಂದ್ರಕಾಂತ ಶಿಲೆ ನೀರನ್ನು ಸೂಸುತ್ತದೆ.

[6] ಪ್ರಿಯನ ಆಲಿಂಗನದ ಬಿಗಿಯಿಂದ ಮತ್ತು ಸಂಭೋಗದ ಆಯಾಸದಿಂದ ಯಕ್ಷಕನ್ನಿಕೆ ಉಸಿರು ಬಿಡುತ್ತಿದ್ದರೆ ಅವಳ ಆಯಾಸವನ್ನು ಕಂಡು ಮರುಗುವ ಚಂದ್ರಕಾಂತ ಶಿಲೆ ಅವಳನ್ನು ತಣಿಸಲೆಂದು ಹನಿಗಳನ್ನು ಉದುರಿಸುತ್ತಿದೆಯೇನೋ ಎಂಬಂತೆ ಕಾಣಿಸುತ್ತದೆ.

ಸ್ವಲ್ಪ ಹೊತ್ತಾದ ಮೇಲೆ ಹೊದ್ದ ಮೋಡವು ಹೊರಪಾಗಿ ಅಂದರೆ ಮಳೆಯ ಮೋಡಗಳಿಲ್ಲದೆ ಆಕಾಶವು ನಿರ್ಮಲವಾಗಿ ಕಾಂತಿಯುಕ್ತವಾಗುತ್ತದೆ. ಆಗ ಬಿದ್ದ ಬೆಳದಿಂಗಳಿಂದ ಕುಸುರಿ ಚುಕ್ಕಿನಕ್ಷತ್ರಗಳು ಸುರಿಯುತ್ತವೆ. ಕಿಟಕಿ ತೆರೆಯಲು ಅದರೊಳಗಿಂದ ಚಂದ್ರಕಾಂತ ಒಸರುತ್ತದೆ. ಪ್ರಿಯರ ತೆಕ್ಕೆ ತೋಳೊಳಗೆ ಹೆಣ್ಣುಗಳು ಒರಗಿ ಉಸಿರು ಬಿಡುತ್ತಿರುತ್ತಾರೆ. ಆಗಿನ ಅವರ ಕೂಟದಾಟದ ದಣಿವನ್ನು ಚಂದ್ರನ ಕಾವು ತಾನೇ ಮರುಗಿ ಕರಗಿ ತಣಿಸುತ್ತದೆ.

8

**ತೀರದಿರುವ ತವನಿಧಿಯು ತುಂಬಿದಾ ಕಾಮಿ ಜನರು ಕೂಡಿ[1]**
**ಅಮರ ಗಣಿಕೆಯರ[2] ಸಂಗದಲ್ಲಿ ಸರಸಾಽಲಾಪ ಮಾಡಿ ॥**
**ರಕ್ತಕಂಠ ಕಿನ್ನರರು ಧನದ ಯಶಗೀತ ಹಾಡೆ ಮೀರಿ**
**ಕಾಲ ಕಳೆಯುವರು ದಿನವು ಚೈತ್ರರಥವೆಂಬ ತೋಟ ಸೇರಿ ॥[3]**

ತೀರದಿರುವ ಅಕ್ಷಯ ನಿಧಿ ತುಂಬಿದ ಆ ಕಾಮಿ ಜನರು ಕೂಡಿ ಅಮರ ಗಣಿಕೆಯರ ಸಂಗದಲ್ಲಿ ಸರಸ ಸಲ್ಲಾಪದಲ್ಲಿರುತ್ತಾರೆ. ಅಕ್ಕರೆಯ ಕಂಠದ ಕಿನ್ನರರು ಕುಬೇರನ ಯಶಸ್ಸಿನ ಗೀತೆಯನ್ನು ವೈಭವಯುತವಾಗಿ ಹಾಡುತ್ತಿರುತ್ತಾರೆ. ಅವರು ಆ ಆಮೋದ ಪ್ರಮೋದಗಳಲ್ಲಿ ಚೈತ್ರರಥವೆನ್ನುವ ಕುಬೇರನ ಉದ್ಯಾನವನ್ನು ಸೇರಿ ದಿನ ಕಳೆಯುತ್ತಾರೆ.

9

**ದುಡುಕು ನಡಿಗೆಯಲಿ[4] ಅಲಕದಿಂದ ಮಂದಾರ ಹೂವು ಉದುರಿ[5]**
**ಬೀದಿಯುದ್ದಕೂ ಚಿಗುರುತಿಗುರು, ಕಿವಿಕನಕ-ಕಮಲ ಬಿದಿರಿ ॥[6]**
**ನೂಲು ಹರಿದು ಎದೆಯುಜ್ಜಿ ಜರಿದು ಸರ ಮುತ್ತು ತೊಳಗತಾವ[7]**
**ಮತ್ತ ಕಾಮಿಗಳ[8] ಇರುಳ ಹಾದಿಯನು ಬೆಳಗು ಬೆಳಗತಾವ ॥[9]**

---

[1] ಅಲಕೆಯ ಜನರಿಗೆ ಐಶ್ವರ್ಯಕ್ಕೆ ಕೊರತೆ ಇಲ್ಲ.

[2] ಅಪ್ಸರೆಯರು.

[3] ಕುಬೇರ ನಿರ್ಮಿಸಿಕೊಂಡಿರುವ ಕೈತೋಟ. ಇಲ್ಲಿಗೆ ಆಗಾಗ ಪರಶಿವನೂ ಬಂದು ವಿಶ್ರಾಂತಿ ತೆಗೆದುಕೊಂಡು ಹೋಗುವುದುಂಟು.

[4] ಹೀಗೆ ರಾತ್ರಿಯೆಲ್ಲಾ ಕಾಮಕೇಳಿಯಲ್ಲಿ ಸುಖಿಸುವ ಯಕ್ಷಕನ್ನಿಕೆಯರು ಬೆಳಗಾಗುವ ಮುನ್ನ ಆತುರಾತುರವಾಗಿ ತಮ್ಮ ಸ್ವಸ್ಥಾನಕ್ಕೆ ಹಿಂದಿರುಗುತ್ತಾರೆ.

[5] ರತಿಕ್ರೀಡೆಯ ಪರಿಣಾಮವಾಗಿ ಅವರು ಹೆಣೆದುಕೊಂಡಿದ್ದ ಜಡೆ ಸಡಿಲಗೊಂಡು ಮುಡಿದಿದ್ದ ಮಂದಾರ ಹೂವು ಕೆಳಗೆ ಬೀಳುತ್ತದೆ.

[6] ಅದೇ ರೀತಿ ಕಿವಿಗೆ ಅಲಂಕರಿಸಿಕೊಂಡಿದ್ದ ಚಿನ್ನದ ತಾವರೆ ಹೂವೂ ಉದುರುತ್ತದೆ.

[7] ರಾತ್ರಿಯ ಆಲಿಂಗನದ ಬಿಗಿಯಿಂದಾಗಿ ಕೊರಳ ಮುತ್ತಿನಹಾರ ಹರಿದು ಸರದ ಮುತ್ತುಗಳೆಲ್ಲ ಬೀದಿಯಲ್ಲಿ ಚೆಲ್ಲಾಪಿಲ್ಲಿಯಾಗಿ ಬೀಳುತ್ತವೆ.

[8] ಇಷ್ಟೆಲ್ಲಾ ಆದರೂ ಅವರ ಕಾಮದ ಮತ್ತು ಇನ್ನೂ ಇಳಿದಿರುವುದಿಲ್ಲ.

[9] ಹೀಗೆ ಉದುರುವ ಮಂದಾರ, ಕಮಲ ಮತ್ತು ಹೊಳೆವ ಮುತ್ತುಗಳೇ ಅವರ ಇರುಳ ಹಾದಿಯನ್ನು ಬೆಳಗುತ್ತವೆ.

ಅವರು ತೋಟದಲ್ಲಿ ಆತುರವಾಗಿ ದುಡುದುಡನೆ ನಡೆದಾಡಲು ಅಲಕೆಯ ಮಂದಾರ ಹೂವುಗಳು ಉದುರುವವು. ಅವರ ಉತ್ಸಾಹ ಪ್ರಕಟಗೊಂಡಂತೆ ಆ ಪುಷ್ಪಗಳು ತಮ್ಮ ಪರಿಮಳದ ಗಂಧವನ್ನು ಹಾದಿಯುದ್ದಕ್ಕೂ ಪೂಸುವವು. ಆ ಲಲನೆಯರ ಕಿವಿಯ ಕನಕ ಕಮಲಗಳು ಚೆದುರಿ ಹರಿದಾಡುವವು! ಅವರ ಪರಸ್ಪರ ಆಲಿಂಗನದ ಎದೆಯುಜ್ಜಿ ಸರದ ನೂಲು ಹರಿದು ಮುತ್ತುಗಳು ಸರಿದು ಬಿದ್ದು ತಳತಳಿಸಿ ಹೊಳೆಯುವವು. ಅವು ಆ ಮತ್ತ ಕಾಮಿಗಳ ಇರುಳ ಹಾದಿಯನ್ನು ಬೆಳಗು ಬೆಳಗುವವು.

10

**ಧನದ ಪತಿಯ ಜೊತೆಯಿವನು ಶಿವನು[1] ಇಲ್ಲಿರುವನೆಂದು ಬಗೆದು[2]**
**ಕಬ್ಬು–ತುಂಬಿ–ಹೂವುಗಳ ಬಿಲ್ಲು–ಹೆದೆ–ಬಾಣ ದೂರ ಒಗೆದು ॥[3]**
**ಕಾಮಿಗಳಿಗೆ ಗುರಿಯಿಟ್ಟನಂಗನಿಹನಿಲ್ಲಿ ಕುಡಿಯ ಕಣ್ಗೆ**
**ಇಲ್ಲದಿದ್ದರೀ ಹುಬ್ಬ–ಬಿಲ್ಲಿನಲಿ ಮುರುಕವೇಕೊ ಹೆಣ್ಗೆ ॥[4]**

ಕುಬೇರನ ಜೊತೆಗೆ ಶಿವನು ಅಲ್ಲಿರುವನೆಂದು ಮನ್ಮಥ ತಿಳಿದನು. ತನ್ನ ಕಬ್ಬು ತುಂಬಿ ಹೂವುಗಳ ಬಿಲ್ಲು ಹೆದೆ ಬಾಣಗಳನ್ನು ದೂರ ಒಗೆದನು. ಆ ಅನಂಗನು ಇಲ್ಲಿ ಕಾಮಿಗಳ ಕುಡಿಯ ಕಣ್ಣಿಗೆ ಗುರಿಯಿಟ್ಟನು. ಇಲ್ಲದಿದ್ದರೆ ಹೆಣ್ಣಿಗೆ ಈ ಹುಬ್ಬು ಬಿಲ್ಲಿನಲ್ಲಿ ಬಿಂಕ ಬಿನ್ನಾಣ ಏಕೆ ಉಂಟಾಗುತ್ತಿತ್ತು?

11

**ರಂಗು ರಂಗಿನಾ ಸೀರೆ, ಕಣ್ಣ ತಿರುಪಾಟವಾಡೆ ಮಧುವು**
**ಹೂವು ಹೂವು ಹಲಚಿಗುರು, ಒಡವೆ ತೊಡವಾಗಬಲ್ಲ ಒದವು ॥**
**ಅಡಿಯ ಕಡೆಯ ಕಾರಣೆಯ ಅರಗಿನಾ ಬಣ್ಣ, ಒಂದೆ ಎರಡೇ**
**ಹೆಣ್ಣಿನೆಲ್ಲ ಸಿಂಗರವನೀವುದಾ ಕಲ್ಪವೃಕ್ಷ ಬರಡೇ? ॥[5]**

---

[1] ಕಾಮದ ವರ್ಣನೆಯಲ್ಲಿ ಮುಳುಗಿದಾಗಲೂ ಕಾಳಿದಾಸನಿಗೆ ತನ್ನ ಪ್ರಿಯದೈವವಾದ ಶಿವನ ನೆನಪಾಗುತ್ತದೆ. ಅವನಿಗೆ ಶಿವನ ವರ್ಣನೆ ಕಾಮದ ವರ್ಣನೆಗಿಂತಲೂ ಮಿಗಿಲಿನ ಸಂತೃಪ್ತಿ ನೀಡುತ್ತದೆ.

[2] ಏಕೆಂದರೆ ಈ ಹಿಂದೆ ಕಾಮನು ಶಿವನನ್ನು ಕಾಮಪ್ರೇರಿತನನ್ನಾಗಿಸಲು ಹೋಗಿ ಸುಟ್ಟು ಬೂದಿಯಾಗಿದ್ದ. ಮನ್ಮಥ = ಮನಸ್ಸನ್ನು, ಪ್ರಜ್ಞೆಯನ್ನು ಮಥಿಸುವವನು, ನಾಶಮಾಡುವವನು ಮನ್ಮಥ (ಮನಂ ಮಥ್ಯತಿ ಇತಿ ಮನ್ಮಥಃ)

[3] ಕಬ್ಬೇ ಮನ್ಮಥನ ಬಿಲ್ಲು, ದುಂಬಿಗಳೇ ಆ ಬಿಲ್ಲಿಗೆ ದಾರ ಮತ್ತು ಹೂವುಗಳೇ ಅವನ ಬಾಣಗಳು.

[4] ಶಿವನಿಗೆ ಹೆದರಿ ಮನ್ಮಥ ತನ್ನ ಬಿಲ್ಲನ್ನು ಬಿಸಾಡಿದ ಮೇಲೆ ಆ ಬಿಲ್ಲಿನ ಕೆಲಸವನ್ನು ಅಲ್ಲಿನ ಹೆಣ್ಣುಗಳ ಹುಬ್ಬೇ ಮಾಡುತ್ತಿದೆ. ಹಾಗಲ್ಲದೇ ಆ ಹೆಣ್ಣುಗಳ ಹುಬ್ಬುಗಳೇಕೆ ಬಿಲ್ಲಿನ ಆಕಾರದಲ್ಲಿ ಬಾಗುತ್ತಿತ್ತು?

[5] ಹೆಣ್ಣಿನ ಚೆಲುವನ್ನು ಹೆಚ್ಚಿಸಲು ನಾಲ್ಕು ವಸ್ತುಗಳು ಪ್ರಧಾನವಾದವುಗಳು. ಅವು: ಸೀರೆ, ಕಣ್ನೋಟ, ಹೂವಿನ ಅಲಂಕಾರ ಮತ್ತು ಒಡವೆ ಆಭರಣಗಳು. ಆ ನಾಲ್ಕನ್ನೂ ಅಲಕೆಯಲ್ಲಿ ಕಲ್ಪವೃಕ್ಷವೇ ನೀಡುತ್ತದೆ.

ರಂಗು ರಂಗಿನ ಸೀರೆಯೊಡನೆ ಅವರ ಕಣ್ಣು ಆಹ್ಲಾದದಲ್ಲಿ ಸುತ್ತು ತಿರುಗುತ್ತಿತ್ತು. ಅವರು ಮುಡಿದಿದ್ದ ಹೂವು ಹೂವುಗಳೊಡನೆ ಹಲವು ಚಿಗುರುಗಳಿಂದ ಮತ್ತು ಒಡವೆಯ ತೊಡಿಗೆಯಿಂದ ಶೃಂಗಾರಗೊಂಡಿದ್ದರು. ಅವರ ಪಾದ ಅರಗಿನ ಬಣ್ಣದ ಕಾರಣೆಗಳಿಂದ ಅಲಂಕೃತವಾಗಿತ್ತು. ಒಂದೇ ಎರಡೇ, ಅವುಗಳೆಲ್ಲ ಹೆಣ್ಣಿನ ಪ್ರಸಾಧನವನ್ನು ಪ್ರಕಟಪಡಸುತ್ತಿದ್ದವು. ಆಗ ಮನದಲ್ಲಿ ಏಳುತ್ತಿದ್ದ ಪ್ರಶ್ನೆ "ಆ ಕಲ್ಪವೃಕ್ಷ ಬರಡೇ?"

12

**ಅಲ್ಲಿ ನಮ್ಮ ಮನೆ ಯಕ್ಷಪತಿಯ ಮನೆಯುತ್ತರಕ್ಕೆ ಇಹುದು**
**ಇಂದ್ರಚಾಪ ತೋರಣದಿ ಮೆರೆದು ದೂರಿಂದ ಕಾಣಬಹುದು ॥**
**ಹತ್ತಿರಕ್ಕೆ ನನ್ನಾಕೆ ನೀರನುಣಿಸಿರುವ ಕಂದನಾಗಿ**[1]
**ಕೈ ಎತ್ತರಾದ ಮಂದಾರವೊಂದು ಇದೆ ಗೊಂಚಿಲಾಗಿ ಬಾಗಿ ॥**

ಓ ಮೇಘಬಂಧುವೇ, ಅಲ್ಲಿ ಯಕ್ಷಪತಿಯ ಮನೆಯ ಉತ್ತರಕ್ಕೆ ನಮ್ಮ ಮನೆ ಇದೆ. ಅದು ಕಾಮನ ಬಿಲ್ಲಿನ ತೋರಣದಿಂದ ಶೋಭಿಸುತ್ತಿದ್ದು ದೂರದಿಂದ ಕಾಣಬಹುದಾಗಿದೆ. ಅದರ ಹತ್ತಿರದಲ್ಲಿ ನನ್ನಾಕೆಯು ಸಸಿನೆಟ್ಟು ಕಂದನಂತೆ ಬೆಳೆಸಿದ ಮಂದಾರ ವೃಕ್ಷವಿದೆ. ಅದು ಎತ್ತರವಾಗಿ ಬೆಳೆದು ಗೊಂಚಲು ಗೊಂಚಲಾಗಿ ಬಾಗಿ ಕಂಪು ಬೀರುತ್ತಿದೆ.

13

**ಪಚ್ಚೆಕಲ್ಲ ಮೆಟ್ಟಿಲುಗಳುಳ್ಳ ಹೊಕ್ಕರಣಿ ತುಂಬ ಅಗಲಾ**[2]
**ಹೊನ್ನ ಕಮಲಗಳ ಕಾವು ಹೋಲುತಿದೆ ಹಸಿರು ನೀಲಿ ಮುಗಿಲಾ ॥**[3]
**ಹತ್ತಿರಕ್ಕೆ ಮಾನಸವು ಇರಲಿ, ನೀ ಬರಲಿ ಮೇಲೆ ಠಾವು**
**ಬಿಡದೆ ಹಂಸ ನಮ್ಮಲ್ಲೆ ಆಡುವವು ತೃಪ್ತವಾಗಿ ತಾವು ॥**[4]

ಅಲ್ಲಿರುವ ಪಚ್ಚೆಕಲ್ಲುಗಳ ಪುಷ್ಕರಿಣಿ ತುಂಬ ಅಗಲವಾಗಿದೆ. ಅದರಲ್ಲಿನ ಹೊನ್ನ ಬೆಡಗಿನ ಕಮಲಗಳ ದೇಟು ಹಸಿರು ನೀಲಿ ಮುಗಿಲನ್ನು ಹೋಲುತ್ತದೆ. ಹತ್ತಿರದಲ್ಲಿ ಮಾನಸ ಸರೋವರವಿದೆ. ನೀನು ಮೇಲೆ ಗಗನದಲ್ಲಿ ತೇಲಿಬಂದರೂ ಲೆಕ್ಕಿಸದೆ ರಾಜಹಂಸಗಳು ತಮ್ಮಲ್ಲೇ ತೃಪ್ತವಾಗಿ ಆಡುತ್ತಿರುತ್ತವೆ.

---

[1] ಕಾಳಿದಾಸನ ಕಾವ್ಯ ನಾಟಕಗಳಲ್ಲಿ ಪರಿಸರ, ಗಿಡಮರ, ಅರಣ್ಯ, ವನಸ್ಪತಿಗಳಲ್ಲಿ ವಿಶೇಷ ಮಮತೆ ವ್ಯಕ್ತವಾಗುತ್ತದೆ. ಶಾಕುಂತಲೆ ತನ್ನ ಗಂಡನ ಮನೆಗೆ ಹೋಗುವಾಗಲೂ ತಾನು ಸಾಕಿ ಬೆಳೆಸಿದ್ದ ಗಿಡ ಮರ ಬಳ್ಳಿಗಳಿಂದ, ಅನಾಥ ಶಿಶುಜಿಂಕೆಯಿಂದ ಕಣ್ಣೀರಿಡುತ್ತಾ ಬೀಳ್ಕೊಳ್ಳುತ್ತಾಳೆ.

[2] ನನ್ನ ಮನೆಯ ಅಂಗಳದಲ್ಲಿ ವಿಶಾಲವಾದ ಒಂದು ಕೊಳವಿದೆ. ಆ ಕೊಳಕ್ಕೆ ಪಚ್ಚೆ ಕಲ್ಲುಗಳ ಮೆಟ್ಟಿಲುಗಳನ್ನು ಹಾಕಲಾಗಿದೆ.

[3] ಆ ಕೊಳದಲ್ಲಿ ಮಾನಸ ಸರೋವರದಲ್ಲಿ ಅರಳುವಂತಹ ಬಂಗಾರದ ತಾವರೆಗಳು ಅರಳಿವೆ.

[4] ಅಲ್ಲೇ ಅನತಿ ದೂರದಲ್ಲೇ ಮಾನಸ ಸರೋವರವಿದ್ದರೂ ಹಂಸಗಳು ಅಲ್ಲಿಗೆ ಹೋಗದೇ ನನ್ನ ಮನೆಯಂಗಳದ ಕೊಳದ ನೀರಿನಲ್ಲಿ ಮನೆ ಮಾಡಿಕೊಂಡಿವೆ. ಮಳೆಗಾಲದಲ್ಲಿ ನೀನು ಅದೇ ಮಾರ್ಗವಾಗಿ ಹೋದರೂ ಅವು ನಿನ್ನನ್ನು ಹಿಂಬಾಲಿಸುವುದಿಲ್ಲ.

14

**ಮಾಟಗುಡ್ಡ ಬಿಳಿನೀಲಿ ಮಣಿಯ ಕೋಡಾಗಿ ಅದರ ಬಳಿಗೆ**
**ಇಹುದು ಬೇಲಿ ಹೊಂಬಾಳೆಯಾಗಿ[1] ಹವಣಾಗಿ ಸುತ್ತುವಳಿಗೆ ॥**
**ಅದುವು ಮುದ್ದು ನನ್ನಾಕೆಗಣ್ಣ ಅದರಂತೆ ನಿನ್ನ ಮೋಡಿ**
**ಅದರ ನೆನಪೆ ನನಗಾಗುತಿಹುದು ಮಿಂಚುಳ್ಳ ನಿನ್ನ ನೋಡಿ ॥**

ಅದರ ಬಳಿಯಲ್ಲೇ ಮಾಟವಾದ ಗುಡ್ಡವು ಬಿಳಿ ನೀಲಿ ಮಣಿಯ ಕೋಡಿನಂತಿದೆ. ಮನೆಯನ್ನು ಹವಣಾಗಿ ಸುತ್ತುವರೆದ ಹೊಂಬಾಳೆಯು ಬೇಲಿಯಂತಿದೆ. ನನ್ನಾಕೆಯ ಅಣ್ಣ ಮೇಘವೇ, ಅದು ನನ್ನಾಕೆಯ ಮುದ್ದು. ಅದರಂತೆ ನಿನ್ನ ಮೋಡಿ. ಮಿಂಚುಳ್ಳ ನಿನ್ನನ್ನು ನೋಡಿದಾಗ ನನಗೆ ಅದರ ನೆನಪೇ ಆಗುತ್ತದೆ.

15

**ಸುತ್ತು ಮುತ್ತು ಮದರಂಗಿ, ನಡುವೆ ಮಾಧವಿಯ ಬಳ್ಳಿ[2] ಮಾಡ**
**ಅತ್ತ ಚೆಂದ ಕೇಸರವು, ಇತ್ತಲಿದೆ ಕೆಂಪಶೋಕ ನೋಡಾ ॥**
**ಒಂದು ಬೇಡುವದು ನಿನ್ನ ಸಖಿಯ ಎಡಗಾಲು ಸೋಂಕಲೆಂದು**
**ಮುಕ್ಕು ಮಧುವನುಗುಳಿದರೆ ಸಾಕು ಬಯಸುವದು ಮತ್ತಿನೊಂದು ॥[3]**

ನನ್ನ ಮನೆಯ ಸುತ್ತು ಮುತ್ತು ಮದರಂಗಿ ಗಿಡವಿದೆ. ನಡುವೆ ಮಾಧವಿಯ ಬಳ್ಳಿ ಮಾಡ ರಚಿತವಾಗಿದೆ. ನೋಡು, ಅತ್ತ ಕಡೆ ಚೆಂದವಾದ ಬಕುಲ ವೃಕ್ಷವಿದ್ದರೆ ಇತ್ತ ಕಡೆ ಕೆಂಪು ಅಶೋಕ ವೃಕ್ಷವಿದೆ. ಒಂದು ನಿನ್ನ ಸಖಿಯ ಎಡಗಾಲು ಸೋಕಲೆಂದು ಬಯಸಿದರೆ ಮತ್ತೊಂದು ಅವಳು ಮಧುವನ್ನು ಮುಕ್ಕುಳಿಸಿ ಉಗುಳಿದರೆ ಸಾಕೆಂದು ಬಯಸುವುದು.

16

**ಮರದ ನಡುವೆ ಬಿಳಿ[4] ಹಾಸುಗಲ್ಲು ಬಂಗಾರ ಕೋಲು ನಡುಕೆ[5]**

---

[1] ಅಲಕೆ ಒಂದು ಸ್ವರ್ಣನಗರಿಯಾಗಿದೆ. ಅಲ್ಲಿನ ತಾವರೆ, ಬಾಳೆ ಮುಂತಾದವು ಸಹ ಹೊಂಬಣ್ಣದ್ದಾಗಿದೆ.

[2] ಕನ್ನಡದ ಕವಿಗಳು ಇದನ್ನು 'ಅದಿರ್ಮುತ್ತೆ' ಎಂದು ಕರೆಯುವರು. ಮಧುಮಾಸದಲ್ಲಿ (ಅಂದರೆ ವಸಂತ ಋತುವಿನಲ್ಲಿ) ಅರಳುವುದರಿಂದ ಇದು ಮಾಧವೀಲತೆ.

[3] ಅಶೋಕ ಮತ್ತು ಕೇಸರ (ಬಕುಲ) ಗಿಡಗಳು ಯಕ್ಷನ ಮಡದಿಯ ಇಬ್ಬರು ಗೆಳತಿಯರು. ಅವರು ಗರ್ಭಿಣಿಯರಾಗಿದ್ದರೆ ಅಂದರೆ ಇಷ್ಟರಲ್ಲೇ ಆ ಗಿಡಗಳಿಂದ ಹೂವುಗಳು ಅರಳಲಿವೆ. ಹೂವಿಗೆ ಜನ್ಮ ನೀಡುವ ಮುನ್ನ 'ಮನುಷ್ಯರಿಗೆಂತೋ ಅಂತೆಯೇ– ಗಿಡಗಳಿಗೂ ಬಯಕೆಯಾಗುತ್ತವೆ ಎಂಬುದು ಕವಿ ಸಮಯ. ಇಲ್ಲಿ ಆ ಹೂಗಿಡಗಳಿಗೆ ಯಕ್ಷನ ಮಡದಿಯ ಎಡಗಾಲಿನಿಂದ ಸ್ಪರ್ಶಿಸಿಕೊಳ್ಳುವ ಮತ್ತು ಅವಳು ಉಗುಳಿದ ಮದ್ಯವನ್ನು ಹೀರುವ ಬಯಕೆಯಾಗಿದೆ.

[4] ಮನೆಯ ಮುಂದಿರುವ ಕೇಸರ ಮತ್ತು ಕೆಂಪು ಅಶೋಕ ವೃಕ್ಷಗಳ ಮಧ್ಯೆ ಹಾಸುಗಲ್ಲು ಇದೆ.

[5] ಹಕ್ಕಿಗಳನ್ನು ಆಡಿಸಲೆಂದೇ ಬಳಸುವ ಅಲಂಕೃತ ಕೋಲು.

**ಎಳೆ ಬಿದಿರ ಬಣ್ಣ ಬೆಲೆ ಹರಳಿನಿಂದ ನೆಲೆಗಟ್ಟು ಅದರ ಬುಡಕೆ ॥**
**ಆ ಕೋಲಿನಲ್ಲಿ ಕುಣಿಸುವಳು ನವಿಲ ನನ್ನಾಕೆ ಸಂಜೆಯಲ್ಲಿ**
**ಕೈ ತಟ್ಟಿ ಮಾಟ ಬಳೆ ತಾಕಲಾಟ ಥಕಥೈಯ ಥಾಟಿನಲ್ಲಿ ॥[1]**

ಆ ಮರಗಳ ನಡುವೆ ಬಿಳಿ ಹಾಸುಗಲ್ಲು ಇದೆ. ಅಲ್ಲಿಯ ಸಮ ಮಾಡಿದ ನೆಲಕ್ಕೆ ಎಳೆ ಬಿದಿರ ಬಣ್ಣದ ಬೆಲೆ ಬಾಳುವ ಹರಳುಗಳನ್ನು ಜೋಡಿಸಿದೆ. ನಡುವೆ ಬಂಗಾರದ ಕೋಲು ಇದೆ. ನನ್ನಾಕೆಯು ಸಂಜೆ ಹೊತ್ತಿನಲ್ಲಿ ಆ ಕೋಲಿನಲ್ಲಿ ನವಿಲನ್ನು ಕುಣಿಸುವಳು. ಕೈ ತಟ್ಟುತ್ತ, ಬಳೆಯ ತಾಕಲಾಟದ ಥಕಥೈಯ ಥಾಟಿನಲ್ಲಿ ನೃತ್ಯವಾಡಿಸುವಳು.

17

**ಇಂತು ನಮ್ಮ ಮನೆ ಕಂಡುಕೊಳ್ಳು ನೀ ಬೇರೆ ಗುರುತೆ ಇದಕೆ**
**ಶಂಖ ಪದ್ಮಗಳು ದ್ವಾರಪಾಲರೊಳು ಇದಕೆ ಎಡಕೆ ಬಲಕೆ ॥[2]**
**ಅಲ್ಲಿ ಬಣ್ಣಗುಂದಿರುವ ಮನೆಯ ತೋರುವದು ನನ್ನ ಒಲವಾ[3]**
**ಸೂರ್ಯನಿಲ್ಲದಿರೆ ಕಮಲವೆಂತು ತೋರೀತು ತನ್ನ ಚೆಲುವಾ ॥[4]**

ಹೀಗಿದೆ ನಮ್ಮ ಮನೆ. ಮತ್ತೆ ಇದಕ್ಕೆ ಬೇರೆ ಗುರುತು ಎಂದರೆ ನಮ್ಮ ಮನೆಯ ಬಾಗಿಲಿನ ಮೇಲೆ ಎಡಕ್ಕೆ ಬಲಕ್ಕೆ ದ್ವಾರಪಾಲಕರಂತೆ ಶಂಖ ಪದ್ಮಗಳು ಇವೆ.ಅಲ್ಲಿ ಬಣ್ಣಗುಂದಿರುವ ಮನೆಯು ನನ್ನ ಪ್ರೀತಿಯನ್ನು ಪ್ರಕಟಪಡಿಸುತ್ತಿದೆ. ಸೂರ್ಯ ಇಲ್ಲದಿದ್ದರೆ ಕಮಲ ಹೇಗೆ ಚೆಲುವಾಗಿ ಕಂಡೀತು?

18

**ಆನೆ ಮರಿಯವೊಲು ಮಾಟವಾಗಿ ಒಳಸೇರು ಅಲ್ಲಿ ಹೋಗಿ**
**ಮೊದಲು ಹೇಳಿದಾ ಕೃತಕ ಶೈಲವನ್ನೇರು ಅರಸನಾಗಿ ॥**
**ನಿನ್ನ ಮಿಂಚುಗಣ್ಣನ್ನು ಮಿಟುಕಿಸುತ ಮಿಂಚು ಹುಳವ ಮಾಡು**
**ಆಗ ನಮ್ಮ ಮನೆಯಲ್ಲಿ ನಿನ್ನ ನೋಟವನು ಚೆಲ್ಲಿ ನೋಡು ॥**

ಹೇ ಮೃದು ನೇಹಿಗ ಮೇಘವೇ, ನೀನು ಆನೆಯ ಮರಿಯ ರೀತಿ ಮಾಟವಾಗಿ ಅಲ್ಲಿ ಹೋಗಿ ಒಳಸೇರು. ನಾನು ಈಗಾಗಲೇ ಹೇಳಿರುವ ಕೃತಕ ಶೈಲವನ್ನು ರಾಜನಂತೆ

---

[1] ನವಿಲು ಮೋಡದ ಸ್ನೇಹಿತ. ಅವಳು ನಿನ್ನ ಸ್ನೇಹಿತನೊಂದಿಗೆ ಸ್ನೇಹ ಬೆಳೆಸಿಕೊಂಡಿರುವ ಕಾರಣ ಅವಳನ್ನು ಸಂಪರ್ಕಿಸಲು ಸಂಕೋಚ ಬೇಡ ಎಂದು ಯಕ್ಷ ಮೋಡನಿಗೆ ಹೇಳುತ್ತಿರುವ ಎಂಬ ಭಾವವಿದೆ.

[2] ಶಂಖ ಪದ್ಮಗಳು ಮನೆಗೆ ಸಮೃದ್ಧಿ ಹಾಗೂ ಸುಮಂಗಲದ ಲಕ್ಷಣಗಳಾಗಿವೆ.

[3] ಮನೆ ಬಣ್ಣಗುಂದಿದೆ. ಏಕೆಂದರೆ ಮನೆಯೊಳಗೆ ಮನೆಯೊಡೆಯನಿಲ್ಲ. ಯಕ್ಷ ಮನೆಯಿಂದ ದೂರವಿದ್ದು ಶಾಪಗ್ರಸ್ತ ದಿನಗಳನ್ನು ಕಳೆಯುತ್ತಿರುವುದರಿಂದ ಅವನ ಮಡದಿ ಮಂಕಾಗಿದ್ದಾಳೆ. ಮನೆಯೊಡತಿ ಮಂಕಾಗಿದ್ದ ಮೇಲೆ ಮನೆ ಬೆಳಕಾಗಿರಲು ಸಾಧ್ಯವಿಲ್ಲ.

[4] ಆ ಮನೆಗೆ ಯಕ್ಷನೇ ಸೂರ್ಯನಾಗಿದ್ದಾನೆ.

ಏರು. ನಿನ್ನ ಮಿಂಚುಗಣ್ಣನ್ನು ಮಿಟುಕಿಸುತ್ತ ಮಿಂಚು ಹುಳುವ ಮಾಡು. ನಮ್ಮ ಮನೆಯಲ್ಲಿ ನಿನ್ನ ಮಿನುಮಿನುಗು ನೋಟವನ್ನು ಚೆಲ್ಲಿ ನೋಡು.

19

**ಬಳ್ಳಿ ಮೈಯು[1], ನನೆಹಲ್ಲು, ಕೆಂಪು ತುಟಿ ಹಣ್ಣು ತೊಂಡೆಯಂತೆ**
**ಸಣ್ಣ ನಡುವು, ಚೆಲು ಹುಲ್ಲೆಗಣ್ಣು, ಕುಳಿನಾಭಿ ಸುಳಿಗಳಂತೆ ॥**
**ತುಂಬು ಎದೆಗೆ ನಸು ಬಾಗಿ, ಹರಹು ಹಿಮ್ಮೈಗೆ ಮಂದವಾಗಿ**
**ಎಲ್ಲ ಹೆಣ್ಣಿನೊಳೆ ಬ್ರಹ್ಮಕೃತಿಗೆ ಹೊಸ ಹೊಚ್ಚ ಚೊಚ್ಚಿಲಾಗಿ ॥[2]**

ಮೈಬಳ್ಳಿಯಾಗಿ, ಹಲ್ಲು ಮೋಹಕವಾಗಿ, ಕೆಂಪುತುಟಿ ತೊಂಡೆ ಹಣ್ಣಿನಂತಿದೆ. ಸಣ್ಣ ನಡುವು, ಚೆಲುವಾದ ಹುಲ್ಲೆಗಣ್ಣು, ಕುಳಿನಾಭಿ ಸುಳಿಯಂತಿದೆ. ತುಂಬು ಎದೆಗೆ ತುಸು ಬಾಗಿರುವುದರಿಂದ ಅವಳ ಹರಹು ಹಿಮ್ಮೈಗೆ ಮಂದವಾಗಿದೆ. ಅದು ಎಲ್ಲ ಹೆಣ್ಣಿನಲ್ಲಿ ಬ್ರಹ್ಮಕೃತಿಗೆ ಹೊಸ ಹೊಚ್ಚ ಚೊಚ್ಚಿಲದಂತಾದ ಹೆಣ್ಣಿನ ಸೊಬಗು.

20

**ಹೆಚ್ಚು ಮಾತು ಇರದಚ್ಚ ಅವಳೆ ತಿಳಿ ನನ್ನ ಪ್ರಾಣವೆಂದು**
**ನನ್ನನಗಲಿ ಇಹಳೆಂತೊ ಇರುವವೊಲು ಚಕ್ರವಾಕಿಯೊಂದು ॥[3]**
**ಕಾಲ ಕಳೆದ ಹಾಗೆಲ್ಲ ಕಾಣುವಾತುರವು ಆಳವಾಗಿ**
**ಇಹಳು ಬೇರೆ ಪದ್ಮಿನಿಯೊ ಏನೊ ಚಳಿಕುಳಿರ ಸೋಂಕು ತಾಗಿ ॥[4]**

---

[1] ಕಾಳಿದಾಸನ 'ತನ್ವೀ ಶ್ಯಾಮಾ' ಎಂಬ ಪದವನ್ನು ಬೇಂದ್ರೆ 'ಬಳ್ಳಿಮೈಯ' ಎಂದು ಅನುವಾದಿಸಿದ್ದಾರೆ. ಶ್ಯಾಮಾ ಎಂಬ ಸಂಸ್ಕೃತ ಪದಕ್ಕೆ ಕಪ್ಪುವರ್ಣದವಳು, ಹದಿವಯಸ್ಸಿನವಳು, ಮಧುರವಾದ ಧ್ವನಿ ಉಳ್ಳವಳು, ಇನ್ನೂ ಮಕ್ಕಳನ್ನು ಹೆರದವಳು ಎಂಬೆಲ್ಲ ಅರ್ಥಗಳಿವೆ (ಅಪ್ರಸೂತಾ ಭವೇಚ್ಛ್ಯಾಮಾ ಶ್ಯಾಮ ಷೋಡಶವಾರ್ಷಿಕೀ । ಶ್ಯಾಮಾ ಚ ಶ್ಯಾಮ ವರ್ಣಾ ಚ ಶ್ಯಾಮಾ ಮಧುರ ಭಾಷಿಣೀ).

[2] ಬ್ರಹ್ಮ ಇವಳನ್ನೇ ಹೊಚ್ಚ ಹೊಸ ಮಾದರಿಯಾಗಿ ಇರಿಸಿಕೊಂಡು ಜಗತ್ತಿನ ಉಳಿದೆಲ್ಲ ಹೆಂಗಸರನ್ನು ಸೃಷ್ಟಿಸಿದ.

[3] ಚಕ್ರವಾಕ ಪಕ್ಷಿಗಳಲ್ಲಿ ಗಂಡು ಹೆಣ್ಣುಗಳು ಹಗಲಿಡೀ ಜೊತೆಯಾಗಿರುತ್ತವೆ. ರಾತ್ರಿಯಾಗುತ್ತಲೇ ಅವು ಬೇರಾಗುತ್ತವೆ. ನದಿ, ಕೆರೆ ಅಥವಾ ಸರೋವರದ ಒಂದು ದಡದಲ್ಲಿ ಗಂಡು ನಿಂತರೆ ಅದರ ಎದುರಿನ ದಡದಲ್ಲಿ ಹೆಣ್ಣು ಹಕ್ಕಿ ನಿಂತು ರಾತ್ರಿ ಇಡೀ ಪರಸ್ಪರರಿಗಾಗಿ ಕೂಗುತ್ತಿರುತ್ತವೆ. ರಾಮ ಸೀತೆಗಾಗಿ ಕಾಡಿನಲ್ಲಿ ಗೋಳಾಡುತ್ತಾ ಅಲೆಯುತ್ತಿದ್ದಾಗ ಅವನನ್ನು ಕಂಡು ಚಕ್ರವಾಕಗಳು ನಕ್ಕವಂತೆ. ರಾಮನನ್ನು ಅಣಕಿಸಿದ ಅಪರಾಧಕ್ಕೆ ಯಾರೋ ಋಷಿ ಚಕ್ರವಾಕಗಳಿಗೆ ಈ ಶಾಪ ನೀಡಿದನಂತೆ.

[4] ಪದ್ಮ ಅಥವಾ ತಾವರೆ ಹೂವು ಚಳಿಗಾಲವೆಂದರೆ ಹೆದರುತ್ತವೆ. ಏಕೆಂದರೆ ಚಳಿಗಾಲದಲ್ಲಿ ಅವಕ್ಕೆ ಅರಳಲು ಆಗುವುದಿಲ್ಲ. ಎಂಬುದು ಕವಿಸಮಯ. ನನ್ನ ಮಡದಿಯೂ ಚಳಿಗಾಲದ ಪದ್ಮಿನಿಯಂತೆ ಇರುತ್ತಾಳೆ. ಈ ಕಾರಣದಿಂದಾಗಿ ಅವಳು ಮೇಲೆ ವರ್ಣಿಸಿದ ರೂಪಕ್ಕಿಂತ ಬೇರೆಯ ತರಹದಲ್ಲಿ ಕಾಣಿಸಬಹುದು ಆದರೆ ಅವಳನ್ನು ಬೇರೆ ಯಾರೋ ಹೆಂಗಸು ಎಂದು ಭಾವಿಸದಿರು ಎಂದು ಮೋಡಕ್ಕೆ ಸೂಚಿಸುತ್ತಿದ್ದಾನೆ.

ಅವಳು ಹೆಚ್ಚು ಮಾತನಾಡದ ನಿರ್ಮಲಳು. ಅವಳೇ ನನ್ನ ಪ್ರಾಣವೆಂದು ತಿಳಿ. ನಾವು ಜಕ್ಕವಕ್ಕಿಗಳು. ನನ್ನನ್ನು ಅಗಲಿ ಒಂದೇ ಚಕ್ರವಾಕಿ ಇರುವಂತೆ ಅವಳು ಹೇಗೆ ಇರುವಳೋ! ಕಾಲ ಕಳೆದ ಹಾಗೆಲ್ಲ ಕಾಣುವ ಆತುರವು ಆಳವಾಗಿದೆ. ಅವಳು ಚಳಿ ಶೈತ್ಯದ ಸೋಂಕು ತಗುಲಿ ಬೇರೆ ಪದ್ಮಿನಿಯೋ ಎನ್ನುವಂತೆ ಇರುವಳು.

21

**ಅತ್ತು ಅತ್ತು ಮತ್ತತ್ತು ಕೆದರಿಕೊಂಡಿಹುದು ಕಣ್ಣ ಪೊಗರು[1]**
**ಬೆಚ್ಚನುಸಿರನುಂಡುಂಡು ಸೊಪ್ಪೆಯಾಗಿಹುದು ತುಟಿಯ ಚಿಗುರು ॥[2]**
**ಗಲ್ಲದಲ್ಲಿ ಕೈ, ಓರೆ ಮೋರೆ, ನಿಡಿಗೂದಲುದ್ದ ಚಿಂತೆ**
**ಮೋಡ ಮುಸುಕಲಿರೆ ಮಂಕುಗವಿದ ಆ ದೀನ ಚಂದ್ರನಂತೆ ॥**

ಓ ಮೇಘವೇ, ನನ್ನ ಯಕ್ಷಿ ಅತ್ತು ಅತ್ತು ಮತ್ತತ್ತು ಕಣ್ಣ ಕಾಂತಿ ಚೆದರಿ ಹೋಗಿದೆ. ಬಿಸಿ ಬೆಚ್ಚನುಸಿರು ಉಂಡುಂಡು ಅವಳ ತುಟಿಯ ಚಿಗುರು ಮಾಸಿ ಹೋಗಿದೆ. ಗಲ್ಲಕ್ಕೆ ಕೈ ಆನಿಸಿಕೊಂಡು ಮುಖವನ್ನು ಓರೆ ಮಾಡಿ ನಿಡಿಗೂದಲುದ್ದದ ದೀರ್ಘವಾದ ಚಿಂತೆಯಲ್ಲಿದ್ದಾಳೆ. ಅವಳು ನೀನು (ಮೋಡ) ಮುಸುಕಿದ ದೀನ ಚಂದ್ರನಂತೆ ಮಂಕು ಕವಿದವಳಾಗಿದ್ದಾಳೆ.

22

**ಅವಳು ಬೀಳುವಳೊ ನಿನ್ನ ಕಣ್ಗೆ ಆಚಾರದಲ್ಲಿ ತೊಡಗಿ[3]**
**ಸೊರಗಿ ಕಡ್ಡಿಯಾದವನ ನನ್ನ ಚಿತ್ರವನೆ ಬರೆದ ಹುಡುಗಿ ॥**
**ಇಲ್ಲ ಕೇಳುತಿರಬಹುದು ಸಾಕುಸಾರಿಕೆಯ[4] "ಹೇಳೆ ಜೇನೇ**
**ಅವರ ಮುದ್ದು ನೀ, ನಿಮ್ಮ ಒಡೆಯರನು ಒಮ್ಮೆ ನೆನೆವೆಯೇನೇ?" ॥**

---

[1] ಯಕ್ಷ ತನ್ನ ಹೆಂಡತಿಯ ಮನಸ್ಸನ್ನು ಚೆನ್ನಾಗಿ ಅರ್ಥಮಾಡಿಕೊಂಡಿದ್ದಾನೆ ಎನಿಸುತ್ತದೆ. ತನ್ನ ವಿರಹದಲ್ಲಿ ಅವಳ ಅವಸ್ಥೆ ಹೇಗಿರಬಹುದು ಎಂಬುದರ ಸ್ಪಷ್ಟ ಚಿತ್ರ ಕಟ್ಟಿಕೊಡುತ್ತಿದ್ದಾನೆ.

[2] ದುಃಖದ ನಿಟ್ಟುಸಿರು ತಾಗಿ ಅವಳ ಬಿಂಬಾಧರ (ತುಟಿಗಳು) ವಿವರ್ಣವಾಗಿವೆ.

[3] ಅವಳು ನಿನ್ನ ಕಣ್ಣಿಗೆ ಬಿದ್ದರೆ ಅವಳು ಈ ಕೆಳಗಿನ ಕೆಲಸಗಳಲ್ಲಿ ತೊಡಗಿರುವುದನ್ನು ನೀನು ಕಾಣುವಿ: ಆಚಾರದಲ್ಲಿ ತೊಡಗಿ ಎಂಬುದಕ್ಕೆ ಪೂಜಾಕಾರ್ಯಗಳಲ್ಲಿ ತೊಡಗಿ ಎಂಬ ಅರ್ಥವಿದೆ. ಕಾಳಿದಾಸ 'ಬಲಿವ್ಯಾಕುಲಾ' ಎಂಬ ಪದವನ್ನು ಬಳಸಿದ್ದಾನೆ. ಪೂಜಾಕಾರ್ಯದಲ್ಲಿ ಎರಡು ವಿಧ ಒಂದು ನಿತ್ಯಪೂಜೆ (ನಿತ್ಯವೂ ಮಾಡಲೇಬೇಕಾದ ಪೂಜೆ) ಮತ್ತೊಂದು ನೈಮಿತ್ತಿಕ ಪೂಜೆ (ಯಾವುದೋ ಒಂದು ಫಲವನ್ನು ಸಿದ್ಧಿಸಿಕೊಳ್ಳಲು ಮಾಡುವ ಪೂಜೆ). ಈ ಎರಡರಲ್ಲಿ ಯಾವುದಾದರೂ ಒಂದು ಪೂಜೆಯಲ್ಲಿ ತೊಡಗಿರಬಹುದು.

[4] ಸಾರಿಕಾ ಅವಳು ಸಾಕಿಕೊಂಡಿದ್ದ ಹೆಣ್ಣು ಗಿಣಿಯ ಹೆಸರು. ಅದು ಗಿಣಿಯಲ್ಲ ಮೈನಾ ಹಕ್ಕಿ ಎಂದು ಕೆಲವು ವ್ಯಾಖ್ಯಾನಕಾರರು ಹೇಳುತ್ತಾರೆ. ಎರಡೂ ಹಕ್ಕಿಗಳು ಮನುಷ್ಯರಂತೆ ಮಾತನಾಡಬಲ್ಲವಾದ ಕಾರಣ ಇವನ್ನು ಕಾವ್ಯಗಳಲ್ಲಿ ಗೆಳೆಯ/ಗೆಳತಿಯಂತೆ ಬಳಸಿಕೊಳ್ಳಲಾಗಿದೆ.

ಆರ್ದ್ರ ಗೆಳೆಯನೇ ನಿಯಮ ಕಟ್ಟುಪಾಡುಗಳಲ್ಲಿ ತೊಡಗಿರುವ ಅವಳು ನಿನ್ನ ಕಣ್ಣಿಗೆ ಹೀಗೆ ಕಾಣುತ್ತಾಳೆ: ಸೊರಗಿ ಕಡ್ಡಿಯಾದ ನನ್ನ ಚಿತ್ರವನ್ನೇ ಬರೆಯುತ್ತಿರುತ್ತಾಳೆ. ಇಲ್ಲದಿದ್ದರೆ ಸಾರಿಕೆಯನ್ನು ಕೇಳುತ್ತಿರುತ್ತಾಳೆ: ಹೇಳೆ ಜೇನೇ, ಅವರ ಮುದ್ದು ನೀನು. ನಿಮ್ಮ ಒಡೆಯರನ್ನು ಒಮ್ಮೆ ನೆನೆಯುವೆಯೇನೇ?

23

**ನನ್ನ ಕುರಿತು ಪದವೊಂದು ಕಟ್ಟಿ ಅದ ಹೇಳಲೆಣಿಸಿ ಜಾಣೆ**
**ತಾನೆ ರಚಿಸಿದಾ ಏರು ಇಳುವುಗಳ ಕ್ರಮವ ಮರೆತು ತಾನೇ ॥**
**ತೊಟ್ಟು ಸುರಿವ ಕಂಬನಿಯ ತಂತಿಯನೆ ಮಿಡಿಯುತಿಹಳೊ ದೀನೆ[1]**
**ಮಾಸು ಬಟ್ಟೆ ತೊಟ್ಟವಳ[2] ತೊಡೆಯೊಳಿರಬಹುದು ಬಿದ್ದ ವೀಣೆ ॥**

ಆ ಜಾಣೆ ನನ್ನನ್ನು ಕುರಿತು ಹಾಡೊಂದನ್ನು ಕಟ್ಟಿ ಅದನ್ನು ಹೇಳಲು ಪ್ರಯತ್ನಿಸುತ್ತಿದ್ದಾಳೆ. ತಾನೆರಚಿಸಿದ ಆ ಏರು ಇಳುವುಗಳ ಕ್ರಮ ಮರೆತು ಹೋಗಿರುತ್ತಾಳೆ. ಹಾಗಾಗಿ ಉಕ್ಕಿ ಬಂದು ಹನಿ ಹನಿಯಾಗಿ ತೊಟ್ಟಿಡುವ ಕಂಬನಿಯ ತಂತಿಯನ್ನೇ ದೀನೆಯು ಮಿಡಿಯುತ್ತಿರುತ್ತಾಳೆ. ಮಾಸಿದ ಬಟ್ಟೆ ತೊಟ್ಟ ಅವಳ ತೊಡೆಯಲ್ಲಿ ಇರಬಹುದು ಕೈಜಾರಿ ಬಿದ್ದ ವೀಣೆ!

24

**ಕಳೆದವೆಷ್ಟು ಇನ್ನುಳಿದವೆಷ್ಟು ದಿನವೆಂದು ಲೆಕ್ಕವಿಟ್ಟು[3]**
**ಹೊಸ್ತಿಲಕ್ಕೆ ಹೂವಿಟ್ಟು ನೋಡುವಳೊ ನಾನು ಹೋದ ತೊಟ್ಟು ॥[4]**
**ಇಲ್ಲ ಎದೆಯ ಮುಟ್ಟಿಳಿದ ಮೊದಲ ಸಂಗಗಳ ಸವಿವಳೇನೋ**
**ನಲ್ಲರಗಲೆ ನಲ್ಲೆಯರಿಗೆಲ್ಲ ಇವು ಆಟ ಇಷ್ಟೆ ತಾನೋ? ॥**

ನಾನು ಹೋದಾಗ ಆರಂಭಿಸಿ ಹೊಸ್ತಿಲಕ್ಕೆ ಹೂವನ್ನು ಇಟ್ಟು ಕಳೆದವೆಷ್ಟು ಇನ್ನುಳಿದವೆಷ್ಟು ದಿನಗಳೆಂದು ಲೆಕ್ಕವಿಟ್ಟು ನೋಡುತ್ತಿರುತ್ತಾಳೆ. ಎದೆಯ ತಬ್ಬಿ ಕೂಡಿದ ಮೊದಲ ಸಂಗ ಸುಖವನ್ನು ಸವಿಯುವಳೋ ಏನೋ ನಲ್ಲರು ಅಗಲಲು ನಲ್ಲೆಯರಿಗೆಲ್ಲ ಇವು ಇಷ್ಟೇ ಆಟವಲ್ಲವೇ?

---

[1] ಅವಳು ತನ್ನ ಕಣ್ಣೀರ ತೇವದಿಂದಲೇ ಸಡಿಲಗೊಂಡ ವೀಣೆಯ ತಂತಿಗಳು ಬಿಗಿಗೊಳಿಸಲು, ಶ್ರುತಿಬದ್ಧವಾಗಿಸಲು ಪ್ರಯತ್ನಿಸುತ್ತಿರುವಳೇನೋ ಎನ್ನುವಂತೆ ತೋರುತ್ತದೆ.

[2] ಪ್ರಿಯನಿಂದ/ಗಂಡನಿಂದ ದೂರಾದ ಹೆಣ್ಣುಗಳು ಉತ್ತಮ ವಸ್ತ್ರಾಭರಣಗಳನ್ನು ಧರಿಸುವುದಿಲ್ಲ ಅಥವಾ ಧರಿಸಲು ಅವಳಿಗೆ ಮನಸ್ಸಾಗುವುದಿಲ್ಲ.

[3] ಹೆಣ್ಣು ತನ್ನ ದುಃಖವನ್ನು ಮರೆಯಲು ಅಥವಾ ಅನ್ಯರಿಗೆ ಕಾಣಿಸದಂತೆ ಮರೆಮಾಚಲು ಯಾವೆಲ್ಲ ಕಾರ್ಯಗಳಲ್ಲಿ ತೊಡಗಬಹುದು, ಏನೆಲ್ಲ ಮಾಡಬಹುದು ಎಂಬುದನ್ನು ಊಹಿಸಿ ಕವಿ ಆ ಕಾರ್ಯಗಳನ್ನು ಪಟ್ಟಿ ಮಾಡಿದ್ದಾನೆ.

[4] ಹೊಸ್ತಿಲಿನ ಮೇಲೆ ಒಂದೊಂದೇ ಹೂವಿಡುವ ಮೂಲಕ ಇನ್ನೂ ಎಷ್ಟು ದಿನಗಳಿವೆ ಎಂದು ಎಣಿಸುತ್ತಿದ್ದಾಳೆ ಅಥವಾ ಎಷ್ಟು ಸಂತಸದ ಗಳಿಗೆಗಳನ್ನು ಕಳೆದೆ ಎಂದು ಎಣಿಸುತ್ತಿದ್ದಾಳೆ ಅಥವಾ ತನ್ನ ಮನದಲ್ಲಿ ಯಾವೆಲ್ಲ ರಸಪ್ರಸಂಗಗಳು ನೆನಪಿನಲ್ಲಿವೆ ಎಂಬುದನ್ನು ಎಣಿಸುತ್ತಿದಾಳೆ.

25

**ಹಗಲು ಹೊತ್ತು ಹೋದೀತು ಕೆಲಸದಲಿ ಹೇಗೊ, ಬಲ್ಲೆ ನಾನು**
**ಇರುಳು ಅವಳ ಗತಿಯೇನೋ? ಅಳುವದೋ? ನೆನೆಯಲೊಲ್ಲೆ ನಾನು ॥[1]**
**ನನ್ನ ಸುದ್ದಿ ಹೇಳಿದರೆ ಸಾಕು, ನೀನಿಣಿಕಿ ನೋಡು, ಪಾಪಾ**
**ಸಾಧ್ವಿ ನೆಲದೊಳೇ ನಿದ್ದೆಯಿಲ್ಲದೇ ಹೊರಳುತಿರುವ ತಾಪಾ ॥**

ಪ್ರಿಯ ಸ್ನೇಹಿತ ಮೇಘವೆ, ನನ್ನ ಯಕ್ಷಿಯ ಹಗಲು ಹೊತ್ತು ಹೇಗೋ ಕೆಲಸದಲ್ಲಿ ಕಳೆದು ಹೋಗುತ್ತದೆ. ಆದರೆ ರಾತ್ರಿಯಲ್ಲಿ ಅವಳ ಗತಿ ಏನೋ? ಅಳುವುದೋ? ನಾನು ನೆನೆಯಲು ಇಷ್ಟ ಪಡುವುದಿಲ್ಲ. ನನ್ನ ಸುದ್ದಿ ಹೇಳಿದರೆ ಸಾಕು ಪಾಪ ಆ ಸಾಧ್ವಿ ನಿದ್ದೆಯಿಲ್ಲದೆ ನೆಲದಲ್ಲಿಯೇ ಹೊರಳುತ್ತಿರುವ ಸಂಕಟವನ್ನು ನೀನು ಇಣುಕಿ ನೋಡು.

26

**ಹೊರಳು ಮಗ್ಗುಲಗಲಿಕೆಯ ಹಾಸಿನಲಿ ಸೋತ ಮೈಯ್ಯ ಚೆಲ್ಲಿ[2]**
**ಓರೆಯಾಗಿ ಬಿದ್ದಿರುವ ಚಂದ್ರಕಳೆಯಂತೆ ಪಡುವಲಲ್ಲಿ ॥**
**ಯಾವ ಇರುಳು ನನ್ನೊಡನೆ ಬೇಟದಲಿ ಕ್ಷಣಿಕವಾಗಿ ಹೋಯ್ತು**
**ಅವಳಿಗದುವೆ ಬಿಸಿಯುಸಿರಿಯತ್ತು ಮುಗಿದೀತೆ ಎನುವೊಲಾಯ್ತು ॥**

ಅಗಲಿಕೆಯ ಹಾಸಿಗೆಯಲ್ಲಿ ಹೊರಳು ಮಗ್ಗುಲಲ್ಲಿ ಸೋತ ಮೈ ಚೆಲ್ಲಿರುತ್ತಾಳೆ. ಅದು ಪಶ್ಚಿಮದಲ್ಲಿ ಓರೆಯಾಗಿ ಬಿದ್ದಿರುವ ಚಂದ್ರ ಕಳೆಯಂತಿದೆ. ಅವಳಿಗೆ ಯಾವ ರಾತ್ರಿ ನನ್ನೊಡನೆ ಪ್ರಣಯವು ಕ್ಷಣಿಕವಾಗಿ ಹೋಗಿತ್ತೋ ಅದು ಬೆಚ್ಚನೆಯ ಪ್ರಾಣವಾಯುವಾಗಿ ಮುಗಿದೀತೇ ಎನ್ನುವಂತಾಗಿದೆ.

27

**ಇಂಪುಗರೆವ ಇಂದುವಿನ ಕಿರಣ ಜಾಳಾಂದ್ರದಿಂದ ಸುರಿಯೆ**
**ಆಸೆಗೂಡಿ ಹರಿದೋಡಿ, ನೋಡಿ, ಒಡೆದಂತೆ ಹಿಂದೆ ಸರಿಯೆ ॥[3]**
**ಮುಚ್ಚಲಿಲ್ಲ, ಸರಿ ಬಿಚ್ಚಲಿಲ್ಲ ಎನುವಂಥ ಕಮಲದಂತೆ**
**ಎವೆಯು ತೊಯ್ದು ಕಣ್ತೆರೆಯಲೊಲ್ಲದೇ ನಿಲ್ವಳೇನೋ ಭ್ರಾಂತೆ ॥**

---

[1] ಹಗಲಿನಲ್ಲಿ ಎಲ್ಲ ಹೆಣ್ಣುಗಳೂ ಎಂತಹ ಸಂದರ್ಭದಲ್ಲಿದ್ದರೂ ಒಂದೇ ರೀತಿಯಲ್ಲಿ ನಡೆದುಕೊಳ್ಳುತ್ತಾರೆ. ಅವರ ನಿಜಸ್ಥಿತಿ ರಾತ್ರಿಯ ವೇಳೆ ಸರಿಯಾಗಿ ತಿಳಿಯುತ್ತದೆ. ಆದ್ದರಿಂದ ಅವಳನ್ನು ಅರ್ಥ ಮಾಡಿಕೊಳ್ಳಲು ರಾತ್ರಿಯ ವರೆಗೂ ಕಾಯಿ ಎಂದು ಮೇಘನಿಗೆ ಹೇಳುತ್ತಿದ್ದಾನೆ.

[2] ಇಲ್ಲಿಂದಾಚೆಗೆ ನಾಲ್ಕು ಪದ್ಯಗಳಲ್ಲಿ ಯಕ್ಷನ ಮಡದಿಯ ವಿರಹದುಃಖದ ವರ್ಣನೆ ಇದೆ.

[3] ಹಿಂದೊಮ್ಮೆ ಚಂದ್ರಕಿರಣ ಗಂಡನೊಂದಿಗಿನ ಅವಳ ಸಮಾಗಮಕ್ಕೆ ಸುಖಕರ ಗಳಿಗೆಗೆ ಕಾರಣವಾಗಿತ್ತು. ಈಗ ಚಂದ್ರೋದಯವಾದಾಗ ಅದೇ ಸುಖಕರ ಗಳಿಗೆಗಳು ಚಂದ್ರನ ದಯೆಯಿಂದ ಮರುಕಳಿಸಬಹುದೇನೋ ಎಂಬ ಆಸೆಯಿಂದ ಓಡಿ ಬಂದರೆ ಆ ಚಂದ್ರಕಿರಣಗಳು ವ್ಯತಿರಿಕ್ತ ಪರಿಣಾಮ ಉಂಟು ಮಾಡುತ್ತಿವೆ. ಆದ್ದರಿಂದ ಹೆಣ್ಣು ಚಂದ್ರಕಿರಣವನ್ನು ಕಂಡು ಹಿಂದೆ ಸರಿಯುತ್ತಿದ್ದಾಳೆ.

ಸೊಗಸಾದ ಚಂದ್ರಕಿರಣವು ಜಾಲಂದ್ರ ಬಲೆಯಂತೆ ರಂಧ್ರಗಳಿರುವ ಕಿಟಕಿಯಿಂದ ಸುರಿಯುತ್ತದೆ. ಆಗ ಅವಳು ಆಸೆಗೊಂಡು ಹರಿದೋಡಿ ನೋಡುತ್ತಾಳೆ, ಹಿಂದೆ ಸರಿಯುತ್ತಾಳೆ. ಮುಚ್ಚಲಿಲ್ಲ ಸರಿ ಬಿಚ್ಚಲಿಲ್ಲ ಎನ್ನುವಂಥ ಕಮಲದಂತೆ ಎವೆಯು ತೋಯ್ದು ಹೋಗಿರುತ್ತದೆ. ಕಣ್ಣು ತೆರೆಯಲು ಒಲ್ಲಳೇನೋ ಎನ್ನುವಂತೆ ಭ್ರಾಂತೆ ನಿಂತಿರುತ್ತಾಳೆ.

28

**ತುಟಿಯ ಚಿಗುರನೊಣಗಿಸುವ ಉಸಿರಿನಲೆ ಹಾರಿಸುವಳು ಎಲ್ಲಾ**
**ಎಣ್ಣೆ ಕಾಣದುರುಟಾದ ಮುಂಗುರುಳು ಒಲೆಯೆ ಗಲ್ಲ ಗಲ್ಲಾ ॥**
**ಕಣ್ಣ ತುಂಬ ಕಂಬನಿಯೆ ಆಗಿ, ಕುದಿಯುವಳೊ ತಾನು ಬೆಂದು**
**ನಿದ್ದೆ ಬಂದು, ಕನಸಾರೆ ಕಂಡು, ಸೇರೇನೆ ನನ್ನನೆಂದು ॥**

ಅನಂತರ ತುಟಿಯ ಚಿಗುರನ್ನು ಒಣಗಿಸುವ ಉಸಿರಿನಲ್ಲೆ ಎಲ್ಲವನ್ನೂ ಹಾರಿಸುವಳು. ಎಣ್ಣೆ ಕಾಣದೆ ಉರುಟಾದ ಮುಂಗುರುಳು ಗಲ್ಲವನ್ನು ಒಲಿಸುತ್ತವೆ.ಆ ಮಧುರ ಭಾವಕ್ಕೆ ಕಣ್ಣ ತುಂಬಿ ಕಂಬನಿಯೇ ಆಗಿ, ತಾನು ಬೆಂದು ಕುದಿಯುವಳು. ನಿದ್ದೆ ಬಂದು ಕನಸಾದರೂ ಕಂಡು ಅವನು ನನ್ನನ್ನು ಸೇರನೇ ಎಂದುಕೊಳ್ಳುವಳು.

29

**ಅಗಲಿದಂದೆ ಕಟ್ಟಿತ್ತು ಮುಡಿಯು, ಬಿಚ್ಚಿತ್ತು ಹೆಳಲ ಮಾಲೆ**
**ಕೂಡಿದಂದು ಹಾಕೇನು ನಾನು, ಮುಡಿಸೇನು ಎಂದು ಬಾಲೆ ॥**
**ಕಾದು ಇಹಳು, ಜಡೆಗಟ್ಟಿ ಗಲ್ಲಗಳನುಜ್ಜಿ ಅವುಗಳೊತ್ತೆ**
**ಸಮರುತಿಹಳು ಬೆಳೆದುಗುರಿನಿಂದೆ ಕೂದಲವ ಮತ್ತೆ ಮತ್ತೆ ॥**[1]

ನನ್ನ ಪ್ರಿಯೆಯನ್ನು ಅಗಲಿದ ದಿನ ಅವಳ ಮನೋಹರ ಹೆಳಲ ಮಾಲೆ ಜಡೆಯು ಬಿಚ್ಚಿತ್ತು. ಆಗ ಅವಳು ಮುಡಿಯನ್ನು ಕಟ್ಟಿದ್ದಳು. ಅವಳನ್ನುಮತ್ತೆ ಕೂಡಿದ ದಿನ ನಾನು ಮೃದು ಕೂದಲನ್ನು ಹೆಣೆದು ಜಡೆ ಹಾಕುತ್ತೇನೆ. ಸುಮಧುರ ಕಂಪೊಸರುವ ಹೂಗಳನ್ನು ಮುಡಿಸುತ್ತೇನೆ ಎಂದು ಕಾದಿರುತ್ತಾಳೆ. ಕೂದಲು ಜಡೆಗಟ್ಟಿ ಗಲ್ಲಗಳನ್ನು ಉಜ್ಜಿ ಒತ್ತುತ್ತಿರುತ್ತವೆ. ಆ ಕೂದಲನ್ನು ಬೆಳೆದ ಉಗುರುಗಳಿಂದ ಮತ್ತೆ ಮತ್ತೆ ಸಮರುತ್ತಿರುತ್ತಾಳೆ.

30

**ತೊಡಿಗೆ ತೊರೆದು ಹೆಣವಾಗಿ ಇಹಳೊ ನಾ ಹೇಳಲೇಕೆ ಬಣ್ಣ**
**ಹಾಸಿನಲ್ಲು ಮೈ ಹೊರಳುವಾಗಲೂ ನರಳುತಿಹಳೊ ಸಣ್ಣ ॥**

---

[1] ಕಾಳಿದಾಸನ 'ಅಯಮಿತನಖ' ಎಂಬ ಪದವನ್ನು ಬೇಂದ್ರೆ 'ಬೆಳೆದುಗುರು' ಎಂದು ಅನುವಾದಿಸಿದ್ದಾರೆ. ಪತಿವ್ರತೆಯಾದ ಅವಳು ಪತಿಯಿಲ್ಲದೇ ಅಲಂಕಾರ ವಿಹೀನಳಾಗಿದ್ದಾಳೆ. ಕೂದಲನ್ನು ಉಗುರಿನಿಂದಲೇ ಬಾಚಿ ಪಕ್ಕಕ್ಕೆ ಸರಿಸಿಕೊಳ್ಳುತ್ತಿದ್ದಾಳೆ. ಉಗುರನ್ನು ಅವಳು ಅಲಂಕಾರಕ್ಕೆ ಬೆಳೆಸಿಕೊಂಡಿಲ್ಲ. ಉಗುರನ್ನು ನೇರ್ಪುಗೊಳಿಸಲೂ ಮನಸ್ಸಿಲ್ಲದ ಕಾರಣ ಉಗುರು ಅಸ್ತವ್ಯಸ್ತವಾಗಿ ಬೆಳೆದಿದೆ. ಅಂತಹ ಉಗುರಿನಿಂದಲೇ ಕೂದಲು ಬಾಚಿಕೊಳ್ಳುತ್ತಿದ್ದಾಳೆ.

**ನೀನು ಕೂಡ ಅದ ಕಂಡ ಕೂಡಲೇ ಹನಿಸಿ ಬಿಡುವಿ ಕಣ್ಣ**
**ಕರುಳುಯಿದ್ದ ಎದೆಗಾರರಾರಿದಕೆ ಕರಗದಿರುವರಣ್ಣ ? ॥**

ನನ್ನ ಸಖಿ ವಿಪ್ರಲಂಭ ಶೃಂಗಾರದಲ್ಲಿ ನವೆದು ಒಡವೆಗಳನ್ನು ತೊರೆದು ಹೆಣದಂತೆ ಇದ್ದಾಳೆ. ಅವಳ ಬಣ್ಣವನ್ನು ನಾನು ಏಕೆ ಹೇಳಲಿ? ಹಾಸಿಗೆಯಲ್ಲಿ ಮೈ ಹೊರಳುವಾಗಲೂ ಸಣ್ಣದಾಗಿ ನರಳುತ್ತಿದ್ದಾಳೆ. ಆ ಸ್ಥಿತಿಯನ್ನು ಕಂಡ ಕೂಡಲೆ ನೀನೂ ಸಹ ಕಣ್ಣಿಂದ ನೀರು ಹನಿಸುವೆ. ಇದಕ್ಕೆ ಕರಗದಿರುವ ಕರುಣಿ ಎದೆಗಾರರು ಯಾರಿದ್ದಾರೋ ಅಣ್ಣಾ!?

31

**ನನ್ನಳೊಲೆದ ಆ ನಿನ್ನ ಅತ್ತಿಗೆಯ ಚಿತ್ತವಿಷ್ಟು ನೊಂದು**
**ತರ್ಕಿಸುವೆನು ಮೊದಲಗಲಿ ನನ್ನ ಇರಬಹುದು ಹೀಗೆ ಎಂದು ॥**
**'ನಾನು ಕಾಮ, ಲೋಕೈಕ ಪತಿಯು' ಎನುವಂತೆ ಸತಿಯ ಲೀಲೆ**
**ಬಣ್ಣಿಸಿದೆನು ವಾಚಾಳಿಯಂತೆಯೋ?[1] ಹೇಳು ಕಂಡ ಮೇಲೆ ॥**

ಹೇ ಮೃದು ಹೃದಯಿ ಮೋಡವೇ, ನನ್ನನ್ನು ಒಲಿದ ಆ ನಿನ್ನ ಅತ್ತಿಗೆ ಚಿತ್ತವು ಹೀಗೆ ಎಷ್ಟು ನೊಂದಿರಬಹುದು ಎಂದು ಭಾವಿಸಿ ಅಗಲಿದ ಪ್ರಾರಂಭದಿಂದ ತರ್ಕಿಸುತ್ತಿರುವೆನು. ಓ ನಲ್ಮೆಯ ಸಂದೇಶ ವಾಹಕ ಬಂಧು. 'ನಾನೇ ಕಾಮ, ಲೋಕೈಕ ಪತಿ' ಎನ್ನುವಂತೆ ಸತಿಯ ಲೀಲೆಯನ್ನು ವಾಚಾಳಿಯ ಹಾಗೇನಾದರೂ ಬಣ್ಣಿಸಿರುವೆನೆ ಎಂಬುದನ್ನು ಅವಳನ್ನು ಕಂಡ ಮೇಲೆ ಹೇಳು.

32

**ಕುರುಳು ಜೋತು,[2] ಕುಡಿಗಣ್ಣು ಮುಚ್ಚಿ, ಮಂಕಾಗಿ ಕಾಡಿಗಿರದೇ**
**ಮಧುವ ಕುಡಿಯದೊಣಕಾದ ನಯನ ಮುರಿ ಹುಬ್ಬಿನಾಟ ಮೆರೆದೇ ॥[3]**
**ಹಾರಿ ತನ್ನ ಎಡಗಣ್ಣು, ಬೆಚ್ಚಿ ಬರಿ ಬಾನ ತುಂಬೆ ನೀನೋ**
**ಸುಳಿಯ ಮೀನ ಚಳಕಮಲದಂತೆ ಆ ಕಣ್ಣು ಕಾಂಬವೇನೋ ॥**

ನನ್ನ ನಲ್ಲೆಯ ಮುಂಗೂದಲು ಜೋತಿದೆ. ಕುಡಿಗಣ್ಣು ಮುಚ್ಚಿ ಮಂಕಾಗಿ ಕಾಡಿಗೆ ಹಚ್ಚಿಕೊಳ್ಳದೆ ಇದೆ. ಆಹ್ಲಾದಕರವಾದುದನ್ನು ಕುಡಿಯದೆ ಒಣಕಾದ ನಯನವು ಬಾಗುವ

---

[1] ಅರ್ಥಪೂರ್ಣವಾಗಿ ಮಾತನಾಡುವವನು ವಾಗ್ಮಿ; ಅರ್ಥಹೀನವಾಗಿ ಮಾತನಾಡುವವನು ವಾಚಾಳಿ. ನಾನು ವಾಚಾಳಿಯೋ ಅಥವಾ ನನ್ನ ಮಾತುಗಳಲ್ಲಿ ಅರ್ಥಪೂರ್ಣತೆ ಇದೆಯೋ ಎಂಬುದು ನಿನಗೆ ಅಲ್ಲಿ ಹೋಗಿ ನೋಡಿದಾಗಲೇ ತಿಳಿಯುತ್ತದೆ ಎನ್ನುತ್ತಿದ್ದಾನೆ.

[2] ಬಾಚದಿರುವ ಅವಳ ತಲೆಗೂದಲು ಅವಳ ಕಣ್ಣಳನ್ನು ಮರೆ ಮಾಡಿರುವ ಕಾರಣ ಅವಳ ವಾರೆನೋಟ ಕಾಣಿಸುವುದಿಲ್ಲ. ಅಲ್ಲದೆ, ಅವಳ ಕಣ್ಣಳು ಕಾಡಿಗೆಯಿಂದ ಅಲಂಕೃತವಾಗಿ ಇಲ್ಲ. ಮದಿರೆಯನ್ನು ಸೇವಿಸದ ಕಾರಣ ಅವಳ ಕಣ್ಗಳಲ್ಲಿ ಮಾದಕತೆ ಇಲ್ಲ.

[3] ಆದಾಗ್ಯೂ ಅವಳ ಹುಬ್ಬು ಕೊಂಕಿ ಕುಣಿಯುತ್ತದೆ; ಅವಳ ಪ್ರಯತ್ನದಿಂದಲ್ಲ, ಯಾವುದೋ ಶುಭಶಕುನದ ಸೂಚನೆಯಾಗಿ ಅವಳ ಎಡಗಣ್ಣು ಅಪ್ರಯತ್ನಪೂರ್ವಕವಾಗಿ ಮೇಲಕ್ಕೆ ಹಾರುತ್ತದೆ. ಮೋಡದ ಆಗಮನವೇ ಆ ಶುಭಶಕುನವಾಗಿದೆ.

ಹುಬ್ಬಿನಾಟ ಮರೆತಿದೆ. ಹೆಣ್ಣುಮಕ್ಕಳಿಗೆ ಎಡಗಣ್ಣು ಹಾರಿದರೆ ಅದು ಶುಭ ಶಕುನ ಎಂಬ ನಂಬಿಕೆ ಇದೆ. ಹೀಗೆ ದುಃಖಿತಳಾಗಿ ಮಲಗಿರುವ ಅವಳ ಎಡಗಣ್ಣು ಅದುರುತ್ತದೆ. ಅವಳು ಯಾವುದೋ ಶುಭವಾರ್ತೆ ಬರಲಿದೆ ಎಂದು ಕಾತರದಿಂದ ಕಣ್ಣರಳಿಸಿ ಎದ್ದಾಗ ನಿನಗೆ ಮೀನಿನಂತಹ ಅವಳ ಕಣ್ಣುಗಳು ಚಲಿಸುವ ಕಮಲದ ಹಾಗೆ ಕಾಣಿಸುತ್ತದೆ. ಆ ಹೆಣ್ಣೇ ನನ್ನ ಮಡದಿ.

33

**ಕೆಲಕೆ ಎಡಕೆ ಇನ್ನೂನು ಬಿದ್ದಿಹುದು ಏನೊ ಕೆಟ್ಟ ಗಳಿಗೆ**
**ನಡುವು ಸುತ್ತಿನಾ ಮುತ್ತು ಮಾಲೆ ಸಿಕ್ಕೆನ್ನ ಉಗುರುಗಳಿಗೆ ॥**
**ಕಂಡು ಅದನು ಹೊಂಬಾಳೆದಿಂಡುದೊಡೆ ಅದಿರೆ, ನಾನು ಬಳಿಗೆ**
**ಇಲ್ಲ, ಗಳಿಗೆ ಕಳೆಯುವಳು ನನೆಸಿ ಆ ನೀರೆ ನಿರಿಗೆಗಳಿಗೆ ॥**

ಏನು ಕೆಟ್ಟ ಗಳಿಗೆಯೋ ನನ್ನ ನಲ್ಲೆಯ ನಡುವು ಸುತ್ತಿನ ಆ ಮುತ್ತು ಮಾಲೆ ನನ್ನ ಉಗುರುಗಳಿಗೆ ಸಿಕ್ಕಿ ಕಳಚಿ ಹೋದವು. ಅವು ಪಕ್ಕದಲ್ಲಿ ಎಡಕ್ಕೆ ಇನ್ನೂ ಬಿದ್ದಿರುವವು. ಅದನ್ನು ಕಂಡು ಅವಳ ಹೊಂಬಾಳೆ ದಿಂಡು ತೊಡೆ ಅದುರುತ್ತದೆ. ನಾನು ಬಳಿಯಲ್ಲಿ ಇಲ್ಲ. ಆ ನೀರೆ ಆ ನಿರಿಗೆಗಳನ್ನು ನೆನೆಸಿ ಗಳಿಗೆ ಗಳಿಗೆ ಕಳೆಯುತ್ತಾಳೆ.

34

**ನೀನು ಹೋದ ಆ ಹೊತ್ತೆ ನಿದ್ದೆ ಚಿತ್ತೈಸೆ ಅವಳ ನೋಡಾ**
**ಮೇಘರಾಜ, ದಯೆ ಮಾಡಿ ತಡೆಯೊ ಹುಸಿ ಗುಡುಗು ಹಾಕಬೇಡ ॥**
**ಹೇಗೊ ಕನಸಿನಲಿ ಸೇರಿ ನನ್ನ ಮುಗಿಬಿದ್ದು ಕೊರಳ, ಹುಚ್ಚಿ**
**ಎದ್ದಾಳೊ ಬಾಲೆ ಬಿದ್ದಾಳೊ ಬೆದರಿ ಕೈ ಮಲಕು ಬಿಚ್ಚಿ ಬೆಚ್ಚಿ ॥**[1]

ಹೋ ಮೇಘರಾಜನೆ, ನೀನು ಹೋದ ಆ ಹೊತ್ತೇ ಅವಳಿಗೆ ನಿದ್ದೆ ಚಿತ್ತೈಸಿ ಗಾಢವಾಗಿ ಆವರಿಸಿರಲು ನಿಧಾನವಾಗಿ ನೋಡು. ದಯಮಾಡಿ ಸಾವಧಾನದಿಂದಿರು. ಹುಸಿ ಗುಡುಗು ಹಾಕಬೇಡ. ಹುಚ್ಚಿ, ಹೇಗೋ ಕನಸಿನಲ್ಲಿ ಸೇರಿ ನನ್ನ ಕೊರಳಿಗೆ ಮುಗಿಬಿದ್ದಿದ್ದಾಳೆ. ಎದ್ದಾಳೋ ಬಾಲೆ. ಬಿದ್ದಾಳೋ ಬೆದರಿ ಕೈ ಮಲಕು ಬಿಚ್ಚಿ ಬೆಚ್ಚಿ.

35

**ತಂಗಾಳಿ ಬೀಸಿ ತುಂತುರಿಸಿ ನೀನು ಎಚ್ಚರಿಸಿದಾಗ ಬಾಲೆ**[2]

---

[1] ಪದ್ಮಿನೀ ಜಾತಿಯ ಹೆಂಗಸರ ಕನಸು ಒಂದು ಗಳಿಗೆ ಮಾತ್ರ ಉಳಿದಿರುತ್ತದೆ. ಆದ್ದರಿಂದ ಅವಳು ಕನಸು ಪೂರ್ತಿ ಕಾಣುವವರೆಗೂ ಗುಡುಗಿ ಗದ್ದಲಿಸದೇ ಕಾಯಿ ಎಂದು ಮೋಡಕ್ಕೆ ಹೇಳುತ್ತಿದ್ದಾನೆ.

[2] ಹೀಗೆ ಕನಸು ಪೂರ್ಣಗೊಂಡ ಮೇಲೆ ನಿನ್ನ ತುಂತುರು ಹನಿಗಳಿಂದ ಅವಳನ್ನು ಎಚ್ಚರಿಸು.

ಮಳೆಯಾಗಿ ಮಿಂದ ಹೊಸ ಮೊಲ್ಲೆ ಮೂಸಿ ಮನವಾಸಿಯಾದ ಮೇಲೆ ॥[1]
ಮಿಂಚಿನವನೆ[2] ಹಿಗ್ಗಣ್ಣಿನವಳಿಗಾ[3] ಬೆಳಕುಕಂಡಿಯಿಂದಾ
ಮಾತನಾಡು ಗಂಭೀರವಾಗಿ ನಸು ಗುಡುಗು ಬೆಡಗಿನಿಂದಾ ॥[4]

ನೀನು ಸಾವಕಾಶವಾಗಿ ತಂಗಾಳಿ ಬೀಸಿ ತುಂತುರಿಸಿ ಬಾಲೆಯನ್ನು ಎಚ್ಚರಿಸು. ಅವಳು ಮಳೆಯಲ್ಲಿ ಮಿಂದ ಹೊಸ ಮೊಲ್ಲೆ ಕಂಪನ್ನು ಮೂಸಿ, ಮನಸ್ಸನ್ನು ವಾಸಿ ಮಾಡಿಕೊಳ್ಳುವಳು. ಹೇ ಮಿಂಚಿನವನೇ, ಆಗ ಸಂತೋಷದಿಂದ ಹಿಗ್ಗಿದ ಕಣ್ಣಿನವಳಿಗೆ ಬೆಳಕು ಕಿಂಡಿಯಿಂದ ಮಾತನಾಡು. ಗಂಭೀರನಾಗಿ ನಸು ಗುಡುಗು ಬೆಡಗಿನಿಂದ ಹೀಗೆ ನುಡಿಯಾಡು.

36

ಕೇಳು ಮಂಗಲೇ[5], ಬಂದೆ ನಾಥ-ಸ್ನೇಹಿತನು ಜಲದ ನಾನು
ಅವನ ಕುಶಲವನು ಎದೆಯೊಳಿರಿಸಿಕೊಂಡಿಹೆನು, ಕೆಲಸವೇನು? ॥
ದೂರ ಹೋದ ದಾರಿಗರ ತರುವೆನವರವರ ಮಂದಿರಕ್ಕೆ
ತಮ್ಮ ನಲ್ಲೆಯರ ಹೆಳಲ ಬಾಚಿ, ಹಳೆ ಹಿಣಿಲ ಬಿಡಿಸಲಿಕ್ಕೆ ॥[6]

ಕೇಳು ಮಂಗಲೆ, ನಿನ್ನ ಪತಿಯ ಸ್ನೇಹಿತನಾದ ಜಲದ ನಾನು. ಅವನ ಕುಶಲ ಸಮಾಚಾರವನ್ನು ಎದೆಯಲ್ಲಿರಿಸಿಕೊಂಡಿರುವೆನು. ನನ್ನ ಕೆಲಸವೆಂದರೆ, ದೂರ ಹೋಗಿರುವ ದಾರಿಗರನ್ನು ಅವರ ಮನೆಗಳಿಗೆ ಕರೆದು ತರುವುದು. ಅವರು ತಮ್ಮ ನಲ್ಲೆಯರ ಜಡೆಗೊಂಡ ತಲೆಗೂದಲನ್ನು ಬಾಚಿ ಜಡೆ ಹಾಕುವಂತೆ ಮಾಡುವುದು.

---

[1] ಎದ್ದ ಕೂಡಲೆ ತುಂತುರಿನಿಂದ ತೇವಗೊಂಡ ಹೊಸ ಮಲ್ಲಿಗೆಯ ಹೂವನ್ನು ಮೂಸಿ ಅವಳು ತನ್ನ ಎದೆಯ ದುಃಖವನ್ನು ನೀಗಿಕೊಳ್ಳುತ್ತಾಳೆ.

[2] ಕವಿ ಇಲ್ಲಿ ಮೋಡವನ್ನು 'ಮಿಂಚಿನವನೆ' ಎಂದು ಸಂಬೋಧಿಸಿರುವುದು ಬಹಳ ಔಚಿತ್ಯಪೂರ್ಣವಾಗಿದೆ. ಏಕೆಂದರೆ ಹೊಳೆವ ಮಿಂಚು ಮೋಡದ ಹೆಂಡತಿಯಾಗಿದೆ. ಯಕ್ಷ ಮೋಡಕ್ಕೆ "ನೀನು ನನ್ನ ಹೆಂಡತಿಯೊಂದಿಗೆ ಮಾತನಾಡುವಾಗ ನಿನ್ನ ಹೆಂಡತಿಯನ್ನೂ ಜೊತೆಗೆ ಕರೆದೊಯ್ಯಿ. ಪರಪತ್ನಿಯೊಂದಿಗೆ ಏಕಾಂತದಲ್ಲಿ ಮಾತನಾಡುವುದು ವಿಹಿತವಲ್ಲ" ಎಂಬ ಸಂದೇಶವನ್ನೂ ನೀಡುತ್ತಿದ್ದಾನೆ.

[3] ಬೇಂದ್ರೆಯವರು ಸಂತೋಷದಿಂದ ಹಿಗ್ಗಿದ ಅಗಲವಾದ ಕಣ್ಣನ್ನು 'ಹಿಗ್ಗಣ್ಣು' ಎಂದು ಹೊಸ ಪದ ಸೃಷ್ಟಿಸಿ ಬಳಸಿದ್ದಾರೆ.

[4] ಎದ್ದು ಕಿಟಕಿಯಿಂದ ಹೊರಗೆ ನೋಡಿದಾಗ ಅಲ್ಲಿ ನೀನೇ ಅವಳ ಅಗಲವಾದ ಕಣ್ಣುಗಳಿಗೆ ಕಾಣಿಸುವೆ. ಆಗ ನೀನು ನಿನ್ನ ಗುಡುಗಿನ ಗಂಭೀರ ಧ್ವನಿಯಿಂದ ಅವಳೊಂದಿಗೆ ಮಾತನಾಡು. ಏನೆಂದು ಮಾತನಾಡಬೇಕು ಎಂಬುದು ಮುಂದಿನ ಪದ್ಯಗಳಲ್ಲಿದೆ:

[5] ಮುತ್ತೈದೆಯರನ್ನು 'ಮಂಗಲೇ' ಎಂದು ಸಂಬೋಧಿಸುವರು. ಹೀಗೆ ಸಂಬೋಧಿಸುವ ಮೂಲಕ ಮೋಡನು ನಿನ್ನ ಗಂಡ ಕ್ಷೇಮದಿಂದಿದ್ದಾನೆ ಎಂಬ ಸಂದೇಶವನ್ನೂ ಅಯಾಚಿತವಾಗಿ ಅವಳಿಗೆ ನೀಡುತ್ತಿದ್ದಾನೆ.

[6] ಗಂಡಂದಿರು ಮನೆಗೆ ಹಿಂದಿರುಗಿದ ಮೇಲೆ ಹೆಂಡತಿಯರ ಜಡೆಗೂದಲನ್ನು ಸಡಲಿಸುವುದು ಮತ್ತು ಹೊರಗೆ ಹೋಗುವಾಗ ಅವಳ ಕೂದಲನ್ನು ಹೆಣೆಯುವುದು ಕಾಳಿದಾಸನ ಕಾಲದಲ್ಲಿದ್ದ ಒಂದು ವಾಡಿಕೆಯಾಗಿತ್ತು.

37

**ಹೀಗೆ ಹೇಳುತಲೆ, ಸೀತೆ[1] ಹನುಮನನು ಕಾಣುವಂತೆ ಕಂಡು[2]**
**ನಿನ್ನ ಮಾತು ಎದೆಯುಬ್ಬಿ ಕೇಳುವಳೊ, ಅಪ್ಪ, ಇದಿರುಗೊಂಡು ॥**
**ಪ್ರಿಯರ ಕುಶಲ ಸ್ನೇಹಿತರೆ ಹೇಳಿದರೆ ಕೇಳಬೇಕೆ ನ್ಯೂನ?**
**ಕಾಂತೆಯರಿಗೆ ಏಕಾಂತದಂತೆ ಕೂಟಕ್ಕು ಕಿಂಚಿದೂನ! ॥**

ಹೀಗೆ ನೀನು ಹೇಳುತ್ತಲೇ ಸೀತೆ ಹನುಮನನ್ನು ಕಾಣುವಂತೆ ನಿನ್ನನ್ನು ಕಾಣುವಳು. ಅಪ್ಪ ಎದಿರುಗೊಂಡು ನಿನ್ನ ಮಾತನ್ನು ಎದೆಯುಬ್ಬಿ ಕೇಳುವಳು. ಪ್ರಿಯರ ಕುಶಲವನ್ನು ಸ್ನೇಹಿತರೇ ಹೇಳಿದರೆ ಅದರಲ್ಲಿ ಕೊರತೆಯುಂಟೇ? ಅದು ಕಾಂತೆಯರಿಗೆ ಏಕಾಂತದ ಕೂಟಕ್ಕಿಂತ ತುಸು ಕಡಿಮೆಯಷ್ಟೇ.

38

**ಹೇಳು ನಿನ್ನ ಧರ್ಮಕ್ಕೆ, ನನ್ನ ಭಾಗ್ಯಕ್ಕೆ, ರಾಜಬಾಳು[3]**
**ರಾಮಗಿರಿಗಳಲ್ಲಿರುವ ನಿನ್ನ ಸಂಗಾತಿಯೆಂದು ಹೇಳು ॥[4]**
**ಒಳ್ಳಿತೇನೆ ಅಬಲೇಽ ಎಂದು ನನಗಾಗಿ ಕೇಳು ಕೂರ್ತು**
**ಕಷ್ಟ ಸುಲಭವಿರುವಂಥ ಪ್ರಾಣಿಗಳಿಗಿದೇ ಮೊದಲ ಮಾತು ॥**

ಹೇ ರಾಜಬಾಳ್ವೆಯವನೇ, ನಿನ್ನ ಧರ್ಮಕ್ಕೆ ನನ್ನ ಭಾಗ್ಯಕ್ಕೆ ನಿನ್ನ ಸಂಗಾತಿ ರಾಮಗಿರಿಯಲ್ಲಿರುವನು ಎಂದು ಸಂದೇಶ ಹೇಳು. ನನ್ನ ಒಲ್ಮೆಯವಳನ್ನು ಅಬಲೆ ನೀನು ಸುಖವೇ? ಎಂದು ನಾನು ಕೇಳಿದೆನೆಂದು ಹೇಳು. ಸುಲಭವಾಗಿ ಕಷ್ಟಕ್ಕೆ, ವಿಪತ್ತಿಗೆ ಈಡಾಗಬಲ್ಲ ಮೃದು ಹೃದಯದವರಿಗೆ ಇದೇ ಸೂಕ್ತ ಸಮಾಧಾನ ನುಡಿ.

39

**ನಿನ್ನ ಹಾಗೆ ಮೈ ಸೊರಗಿ,[5] ಕಾದು, ಕಣ್ಸುರಿಸಿ, ಕಂಠ ಬಿಗಿದು**

---

[1] ತನ್ನ ಹೆಂಡತಿಯನ್ನು ಸೀತೆಗೆ ಹೋಲಿಸುವ ಮೂಲಕ ಮತ್ತು ಮೋಡವನ್ನು ಹನುಮಂತನಿಗೆ ಹೋಲಿಸುವ ಮೂಲಕ ಯಕ್ಷನು ಅವರಿಬ್ಬರ ಬಗ್ಗೆ ಅದೆಂತಹ ಆದರಭಾವ ಇರಿಸಿಕೊಂಡಿದ್ದಾನೆಂಬುದು ವ್ಯಕ್ತವಾಗುತ್ತದೆ.

[2] ಸೀತೆ ಹನುಮಂತನನ್ನು ತಲೆಯೆತ್ತಿ ನೋಡಿದಳು. ಏಕೆಂದರೆ ಅವನು ಮರದ ರೆಂಬೆಯ ಮೇಲೆ ಕುಳಿತಿದ್ದ. ಈಗ ಯಕ್ಷನ ಮಡದಿಯೂ ಮೋಡವನ್ನು ಅದೇ ರೀತಿ ತಲೆಯೆತ್ತಿ ಉತ್ಸಾಹದಿಂದ ನೋಡಬೇಕಾಗಿದೆ.

[3] ಕಾಳಿದಾಸ ಮೋಡವನ್ನು 'ಆಯುಷ್ಮಾನ್' ಎಂದು ಸಂಬೋಧಿಸುತ್ತಾನೆ. ಇದನ್ನು ಬೇಂದ್ರೆ 'ರಾಜಬಾಳು' (ರಾಜನಂತೆ ಬಾಳ್ವೆಯುಳ್ಳವನೇ) ಎಂದು ಅನುವಾದಿಸಿದ್ದಾರೆ. ಹೀಗೆ ಸಂಬೋಧಿಸುವ ಮೂಲಕ ಯಕ್ಷ ಮೋಡವನ್ನು ಆಶೀರ್ವದಿಸುತ್ತಿರುವನು.

[4] ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಯಕ್ಷ ಮೋಡನ ಕೈಲಿ'ನಿನ್ನ ಗಂಡ ರಾಮಗಿರಿಗಳಲ್ಲಿ ಇದ್ದಾನೆ' ಎಂದಷ್ಟೇ ಹೇಳಿಸುತ್ತಿದ್ದಾನೆ. 'ಅವನು ಸುಖವಾಗಿದ್ದಾನೆ' ಎಂದು ಹೇಳಿಸುತ್ತಿಲ್ಲ

[5] ಅವಳು ಸಪೂರ ಆಕಾರದವಳು ಎಂಬುದು ತಿಳಿಯುತ್ತದೆ. ಇದೀಗ ಯಕ್ಷನೂ ಅವಳ ಗಾತ್ರಕ್ಕೇ ಇಳಿದಿದ್ದಾನೆ, ಅಂದರೆ ಅವಳಂತೆಯೇ ಸಣ್ಣಗಾಗಿದ್ದಾನೆ.

**ಉಸಿರಿಗಿಷ್ಟು ನಿಟ್ಟುಸುರು, ಯೋಗದಲಿ ದೇಶದೆಲ್ಲೆ ಜಿಗಿದು ॥**
**ವೈರಿ ವಿಧಿಯು ಕಟ್ಟಿರಲು ದಾರಿ, ತೆರೆದಿದ್ದೆ ಹಾದಿ ಜಾಣೆ**
**ಭಾವದಿಂದ ಒಡಗೂಡ ಬಯಸಿದೆನೆ ನನ್ನ ಭಾವರಾಣಿ ॥** [1]

ನಿನ್ನ ಹಾಗೆ ಮೈ ಸೊರಗಿದ್ದೇನೆ. ಕಾದು ಕಣ್ಣುರಿಸಿ ಕಂಠ ಬಿಗಿದು ನಿಟ್ಟುಸಿರು ಬಿಡುತ್ತಿದ್ದೇನೆ. ವೈರಿ ವಿಧಿಯು ದಾರಿಯನ್ನು ಕಟ್ಟಿಹಾಕಿದೆ. ಜಾಣೆಯೇ, ಹಾಗಿದ್ದರೂ ಯೋಗದಿಂದ ದೇಶದ ಎಲ್ಲೆ ಜಿಗಿದು ಹಾದಿ ತೆರೆದಿದೆ. ಹೇ ಭಾವರಾಣಿಯೇ, ಭಾವದಿಂದ ಒಡಗೂಡ ಬಯಸಿದ್ದೇನೆ ಎಂದು ನನ್ನ ಭಾವನೆಯನ್ನು ತಿಳಿಸು. ಹಾಗೂ ನನ್ನ ಈ ಮಾತನ್ನು ಮರೆಯದೇ ಹೇಳು.

40

**ಏನೊ ಹೇಳುವಾ ನೆವನ ಮಾಡಿ ತುಟಿ ತಂದು ಕಿವಿಯ ಬಳಿಗೆ**[2]
**ನಿನ್ನ ಸಖಿಯರಿದಿರಲ್ಲೆ ಒರಗಿರುತ್ತಿದ್ದೆ ಗಳಿಗೆ ಗಳಿಗೆ ॥**
**ಮಾತಿನಾಚೆ, ಕಣ್ಣಾಚೆ ನನ್ನವಳು, ಇಂದು ಬವಣೆಗೊಂಡೆ**
**ಹೇಳು ನಾನು ನಿನ್ನಿದಿರು ಬಯಲಿನಲಿ ಹೀಗೆ ಕೂಗಿಕೊಂಡೆ ॥**

ಏನೋ ಹೇಳುವ ನೆವ ಮಾಡಿಕೊಂಡು ತುಟಿಯನ್ನು ಕಿವಿಯ ಬಳಿಗೆ ತರುತ್ತಿದ್ದೆ. ನಿನ್ನ ಸಖಿಯರ ಎದುರಿನಲ್ಲಿಯೇ ಗಳಿಗೆ ಗಳಿಗೆ ನಿನ್ನನ್ನು ಒರಗಿರುತ್ತಿದ್ದೆ. ಮಾತಿನಿಂದ ಕಣ್ಣ ನೋಟದಿಂದ ನನ್ನವಳು ದೂರವಾಗಿರುವೆ ಎಂದು ಬವಣೆಗೊಂಡ ನಾನು ಇಂದು ನಿನ್ನೆದುರಿನಲ್ಲಿ ಹೀಗೆ ಕೂಗಿಕೊಂಡೆ ಎಂಬುದನ್ನು ತಿಳಿಸು.

41

**ಬಳ್ಳಿಯಲ್ಲಿ ಆ ಬಳುಕು ಮೈಯ್ಯು,**[3] **ಹುಲ್ಲೆಯಲಿ ಬೆದುರುಗಣ್ಣು**[4]

---

[1] ಶರೀರವಷ್ಟೇ ಅಲ್ಲ ಭಾವವೂ ನಿನ್ನಂತೆಯೇ ಆಗಲು ಬಯಸಿದೆ. ಅಂದರೆ ಮನಃಸ್ಥಿತಿಯೂ ನಿನ್ನದೇ ಆಗಿದೆ.

[2] "ನಿನ್ನ ಮುಖವನ್ನು ಸ್ಪರ್ಶಿಸುವ ಬಯಕೆಯಿಂದ, ಎದುರಿಗೆ ಅವಳ ಸಖಿಯರು ಕುಳಿತಿದ್ದಾರೆಂಬುದನ್ನೂ ಲೆಕ್ಕಿಸದೇ, ಕಿವಿಯಲ್ಲಿ ಏನೋ ಹೇಳಬೇಕು ಎಂಬ ನೆವ ಮಾಡಿಕೊಂಡು ಸಮೀಪಿಸುತ್ತಿದ್ದೆ. ಈಗ ಯಾವ ನೆವದಿಂದ, ಏನೆಂದು ನಿನ್ನೊಂದಿಗೆ ನುಡಿಯಲಿ? ಆದರೂ ಹೀಗೆ ಕೂಗಿಕೊಳ್ಳುತ್ತಿದ್ದೇನೆ" ಎನ್ನುತ್ತಿದ್ದಾನೆ. ಪ್ರೇಮಿಗಳು ಅಗಲಿದ/ದೂರವಿರುವ ತಮ್ಮ ಪ್ರಿಯತಮೆಯರೊಂದಿಗೆ ನಾಲ್ಕು ಮಾರ್ಗಗಳಲ್ಲಿ ಅನುಸಂಧಾನ ಮಾಡಲು ಪ್ರಯತ್ನಿಸುತ್ತಾರೆ. ಅವು: (1) ಅವಳ ರೂಪವನ್ನು ಹೋಲುವ ವಸ್ತುವಿನಲ್ಲಿ ಅವಳನ್ನು ಕಾಣುವ ಮೂಲಕ (2) ಅವಳ ಚಿತ್ರವನ್ನು ಸ್ವತಂತ್ರವಾಗಿ ಬರೆಯುವ ಮೂಲಕ (3) ಕನಸಿನಲ್ಲಿ ಅವಳ ಮುಖವನ್ನು ನೋಡಲು ಪ್ರಯತ್ನಿಸುವ ಮೂಲಕ (4) ಅವಳು ಸ್ಪರ್ಶಿಸಿದ ವಸ್ತುಗಳನ್ನು ಸ್ಪರ್ಶಿಸುವ ಮೂಲಕ. ಮುಂದಿನ ನಾಲ್ಕು ಪದ್ಯಗಳು ಈ ನಾಲ್ಕು ಮಾರ್ಗಗಳನ್ನು, ಯಕ್ಷನ ಈ ನಾಲ್ಕು ಪ್ರಯತ್ನಗಳನ್ನು ವಿವರಿಸುತ್ತವೆ.

[3] ಬಳ್ಳಿಯಲ್ಲಿ ನಿನ್ನ ಬಳುಕು ಮೈ ಕಾಣಿಸಿತು ಆದರೆ ತೃಪ್ತಿಯಾಗಲಿಲ್ಲ ಏಕೆಂದರೆ ಅದರಲ್ಲಿ ನಿನ್ನ ಮೈಬಣ್ಣ ಕಾಣಿಸಲಿಲ್ಲ.

[4] ಹುಲ್ಲೆಯಲ್ಲಿ ನಿನ್ನ ಬೆದರುಗಣ್ಣು ಕಾಣಿಸಿತೇ ವಿನಾ ನಿನ್ನ ಮುಖಾರವಿಂದದ ದರ್ಶನವಾಗಲಿಲ್ಲ.

**ಮುಖದ ಛಾಯೆ ಚಂದ್ರನಲಿ, ಗರಿಗಳಲಿ ಹೆಳಲ ಭಾರವನ್ನು ॥**[1]
**ನದಿಯ ಹರಿತದಲಿ ಹುಬ್ಬು ಮುರಿತವನು ಕಾಣಬೇಕು ಎಂದೆ**
**ಇಷ್ಟು ಕೂಡ ಸಾದೃಶ್ಯ ಕಾಣದೆ, ಚಂಡಿ**[2]**, ನೊಂದೆ, ಬೆಂದೆ ॥**

ನಾನು ಬಳ್ಳಿಯಲ್ಲಿ ನಿನ್ನ ಆ ಬಳುಕು ಮೈ, ಹುಲ್ಲೆಯಲ್ಲಿ ಬೆದರುಗಣ್ಣು, ಚಂದ್ರನಲ್ಲಿ ಮುಖದ ಛಾಯೆ, ಗರಿಗಳಲ್ಲಿ ಹೆಳಲ ಭಾರ, ನದಿಯ ಹರಿತದಲ್ಲಿ ಹುಬ್ಬಿನ ಮುರಿತವನ್ನು ಕಾಣಬೇಕೆಂದುಕೊಂಡೆ. ಆದರೆ ಸ್ವಲ್ಪವೂ ಸಾದೃಶ್ಯವನ್ನು ಕಾಣದೆ ಮಡದಿಯೇ ನೊಂದೆ ಬೆಂದೆ.

42

**ಅರೆಗಳಲ್ಲಿ ಕೆಂಗಾವಿಯಿಂದ**[3] **ಹುಸಿ ಮುನಿಸಿನವಳ ಬರೆದು**
**ನಿನ್ನ ಮೆಲ್ಲಡಿಗೆ ಕೆಡಹಿಕೊಳಲು ಬರುತಿರಲು ಮುಂದುವರಿದು ॥**
**ಕಣ್ಣು ತುಂಬಿ ಕಂಗೆಡಿಸಿ ಕಂಬನಿಯ ಹಳ್ಳ ಹರಿದಿತಲ್ಲs**
**ಚಿತ್ರದಲ್ಲಿ ಕೂಡುವದು ಕೂಡ ಆ ಇದಿಗೆ ಸೇರಲಿಲ್ಲs ॥**

ಕಲ್ಲು ಬಂಡೆಗಳಮೇಲೆ ಕೆಂಪು ಬಣ್ಣದ ಮಣ್ಣು ಕೆಂಗಾವಿಯಿಂದ ಹುಸಿಮುನಿಸಿನ ನಿನ್ನನ್ನು ಬರೆದೆನು. ನಿನ್ನ ಕೋಮಲವಾದ ಪಾದಗಳಿಗೆ ನನ್ನನ್ನು ಕೆಡವಿಕೊಳ್ಳಲು ಮುಂದುವರೆದು ಬರುತ್ತಿದ್ದೆನು. ನೆನಪಿನ ಅಳಲಿನಿಂದ ಕಣ್ಣು ತುಂಬಿ ಕಂಗೆಡಿಸಿ ಹೋಗಿ, ಕಂಬನಿಯ ಹಳ್ಳ ಹರಿಯಿತಲ್ಲ. ಚಿತ್ರದಲ್ಲಿ ಕೂಡುವುದು ಕೂಡ ಆ ವಿಧಿಗೆ ಸೇರಲಿಲ್ಲ.

43

**ಬಯಲಿನಲ್ಲಿ ತೋಳ್ದೆರೆದು ನಿನ್ನ ಬಿಗಿತಾಗಿ ಅಪ್ಪಿಕೊಂಡು**
**ಸಿಕ್ಕೆ ನೀನು ಹೇಗಾರೆ ಎಂದೆ, ನಾ ಕನಸುಗಳಲಿ ಕಂಡು ॥**
**ಇದನು ನೋಡಿ ಮರುಮರುಗದಿರುವ ವನದೇವತೆಯರೆ ಅಲ್ಲಿ?**
**ಮುತ್ತಿನಂಥ ಕಂಬನಿಯ ಸುರಿಸಿದರು ಚಿಗುರು ಚಿಗುರಿನಲ್ಲಿ ॥**[4]

---

[1] ನವಿಲುಗರಿಗಳಲ್ಲಿ ಅವಳ ಚೆಲುವಾದ ಕೂದಲ ದರ್ಶನವಾಯಿತು. ಅವಳು ತನ್ನ ಹೆಣೆದ ಕೂದಲನ್ನು ನಾನಾ ಬಣ್ಣದ ಹೂಗಳಿಂದ ಅಲಂಕರಿಸಿಕೊಂಡಿರುತ್ತಾಳೆ. ನವಿಲುಗರಿಯೂ ನಾನಾ ವರ್ಣಚ್ಛಾಯೆಯಿಂದ ತುಂಬಿರುತ್ತದೆ.

[2] ಕವಿ ಅವಳನ್ನೇಕೆ ಚಂಡಿ ಎಂದು ಕರೆಯುತ್ತಿದ್ದಾನೆ? ತನ್ನ ಗಂಡ ತನ್ನನ್ನು ಬೇರೆ ವಸ್ತುಗಳಲ್ಲಿ ಕಾಣುವ ಪ್ರಯತ್ನ ಮಾಡಿದಾಗ ಹೆಂಡತಿಯಾದವಳಿಗೆ ಕೋಪ ಬರುತ್ತದೆ. ಚಂಡಿಯ ಅವತಾರ ತಾಳುತ್ತಾಳೆ.

[3] ಅಲ್ಲಿ ಚಿತ್ರರಚನೆಗೆ ಸೂಕ್ತವಾದ ಬಣ್ಣ, ಪರಿಕರಗಳು ಇರದಿದ್ದ ಕಾರಣ ಕೆಂಪು ಮಣ್ಣಿನಲ್ಲೇ ಅವಳ ಚಿತ್ರ ರಚಿಸಲು ಪ್ರಯತ್ನಿಸಿದ.

[4] ದೇವತೆಗಳು ಕಣ್ಣೀರು ಹಾಕಬಾರದು. ಅವರು ಕಣ್ಣೀರು ನೆಲದ ಮೇಲೆ ಬಿದ್ದರು ಅದು ಶಾಪವಾಗಿ ಪರಿಣಮಿಸುತ್ತದೆ ಎಂಬ ನಂಬಿಕೆ ಇದೆ. ಆದ್ದರಿಂದ ವನದೇವತೆಯರ ಮುತ್ತಿನಂತಹ ಕಂಬನಿಯನ್ನು ಕವಿ ಚಿಗುರಿನ ಮೇಲೆ ಬೀಳಿಸುತ್ತಿದ್ದಾನೆ.

ನಾನು ಕನಸುಗಳಲ್ಲಿ ನನ್ನನ್ನು ಕಂಡೆ. ಬಯಲಿನಲ್ಲಿ ಅಪ್ಪಿಕೊಂಡು ಹೇಗಾದರೂ ಸಿಕ್ಕಿದೆಯಲ್ಲ ಎಂದುಕೊಂಡೆ. ಇದನ್ನು ನೋಡಿ ಮರುಗದಿರುವ ವನದೇವತೆ ಯಾರು? ಅವರು ಮುತ್ತಿನಂಥ ಕಂಬನಿಯನ್ನು ಚಿಗುರು ಚಿಗುರಿನಲ್ಲಿ ಸುರಿಸಿದರು.

44

**ನನೆಯು ಮುರಿದು, ಚಿಗುರೊಡೆದು, ಬಿದಿರಿರುವ ದೇವದಾರು ಮರವು**
**ಅಂಟು ಸುರಿದ ನರುಗಂಪ ಕುಡಿದ ಕುಳಿಗಾಳಿಗೇನು ಭರವು ॥**
**ಸುಗುಣಿ ನಿನ್ನ ಮೈಮುಟ್ಟಿ ಬಂದಿತೋ ಏನೋ ಎಂದು ನಾನು**
**ಆ ಹಿಮಾದ್ರಿ ವಾತವನೆ ಇಲ್ಲಿ ಉಬ್ಬುಬ್ಬಿ ತಬ್ಬುತಿಹೆನು ॥**[1]

ಮೊಗ್ಗಾಗಿ ಚಿಗುರೊಡೆದು ಹೂಬಿರಿದು ಅಂಟು ಸುರಿದ ಸುವಾಸನೆ ಬೀರುವದು ದೇವದಾರು ಮರ. ಆ ಕಂಪನ್ನು ಕುಡಿದ ಗಾಳಿಗೇನು ಭರವೇ? ಹೇ ಸುಗುಣಿಯೇ ಆ ಗಾಳಿ ನಿನ್ನ ಮೈಮುಟ್ಟಿ ಬಂದಿತೋ ಏನೋ ಎಂದು ನಾನು ಹಿಮಾದ್ರಿಯ ವಾಯುವನ್ನೇ ಇಲ್ಲಿ ಉಬ್ಬುಬ್ಬಿಕೊಂಡು ತಬ್ಬುತ್ತಿದ್ದೇನೆ.

45

**ಮೂರು ಜಾವ ಉದ್ದಿದ್ದ ಇರುಳು ಕ್ಷಣದಂತೆ ಕಳೆಯಬಹುದೇ**[2]
**ಇಡಿಯ ಹಗಲು ಯಾವಾಗಲೂನು ದಿಗಿಲಾಗದಂತೆ ಇಹುದೇ ॥**
**ಇಂತು ಚಿತ್ತ ಕೈಗೂಡದಾಗ ಬಯಲಾಸೆಯಿಂದ ನೊಂದು**
**ನಿನ್ನ ವಿರಹ ವ್ಯಥೆಯಿಂದ ಬೆಂದು ಬದುಕಿಹೆನು ಹೇಗೊ ಇಂದು ॥**

ಹೇ ಮೋಹ ಲಲನೆ, ನಿನ್ನ ವಿರಹ ವ್ಯಥೆಯಿಂದ ನಾನು ಬೆಂದಿದ್ದೇನೆ. ರಾತ್ರಿಯ ಉದ್ದುದ್ದನೆಯ ಮೂರು ಜಾವವನ್ನು ಕ್ಷಣದಂತೆ ಕಳೆಯಲು ಸಾಧ್ಯವೇ? ಇಡಿಯ ಹಗಲು ಯಾವಾಗಲೂ ದಿಗಿಲಾಗದಂತೆ ಇರಲು ಸಾಧ್ಯವೇ? ಹೀಗೆ ಚಿತ್ತ ಕೈಗೂಡದಾಗ ಬರಿ ಆಸೆಯಿಂದ ನೊಂದಿದ್ದೇನೆ. ನಿನ್ನ ವಿರಹ ವ್ಯಥೆಯಿಂದ ಬೆಂದಿದ್ದೇನೆ. ಆದರೂ ಇಂದು ಹೇಗೋ ಬದುಕಿದ್ದೇನೆ.

---

[1] ಈ ಪದ್ಯದಲ್ಲಿ ವಾಲ್ಮೀಕಿಯ ಪ್ರಭಾವವಿದೆ. ಮಡದಿ ಸೀತೆಗಾಗಿ ಹಂಬಲಿಸುತ್ತಾ ಕಾಡಿನಲ್ಲಿ ಅಲೆಯುತ್ತಿದ್ದ ಶ್ರೀರಾಮನು ಗಾಳಿಯೊಂದಿಗೆ ಹೀಗೆ ಮಾತನಾಡುತ್ತಾನೆ:

ವಾ ಹಿ ವಾತಾ ಯತಃ ಕಾಂತಾ ತಾಂ ಸ್ಪೃಷ್ಟ್ವಾ ಮಾಮಪಿ ಸ್ಪೃಶ ।

ತ್ವಯಿ ಮೇ ಗಾತ್ರ ಸಂಸ್ಪರ್ಶಃ ಚಂದ್ರೇ ದೃಷ್ಟಿ ಸಮಾಗಮಾ ॥

"ಎಲೈ ವಾಯುವೇ ನನ್ನ ಕಾಂತೆ ಎಲ್ಲಿದ್ದಾಳೋ ಆ ದಿಕ್ಕಿನಿಂದ ಬೀಸು, ಅವಳನ್ನು ಸ್ಪರ್ಶಿಸಿ ಬಳಿಕ ನನ್ನನ್ನು ಸ್ಪರ್ಶಿಸು. ನಿನ್ನಿಂದ ಅವಳನ್ನು ನಾನು ಸ್ಪರ್ಶಿಸಿದಂತಾಗುತ್ತದೆ, ಚಂದ್ರನಲ್ಲಿ ನಮ್ಮ ದೃಷ್ಟಿಗಳು ಒಂದರೊಡನೊಂದು ಬೆರೆಯುತ್ತವೆ".

[2] ಸುದೀರ್ಘ ರಾತ್ರಿಗೆ ಕ್ಷಣವಾಗಿ ಕುಗ್ಗಲು ಸಾಧ್ಯವೇ? ಹಗಲು ಬೆಳಕು ಇರುಳಾಗಿ ಪರಿಣಮಿಸಲು ಸಾಧ್ಯವೇ?

46

**ಆದರೂನು ಹಿಡಿದಿರುವೆ ಜೀವ ಏನೇನೊ ಲೆಕ್ಕ ಹಾಕಿ**
**ಸುಭಗೆ ಅಂಜಿ ನೀ ಸಾಯಬೇಡ, ಕಳೆ ಕಾಲ ಹೇಗೊ ನೂಕಿ ॥[1]**
**ಯಾರು ಬರಿಯ ಸುಖ, ಬರಿಯ ದುಃಖ ಪಟ್ಟವರು ಲೋಕದಲ್ಲಿ?**
**ದೆಸೆಯು ಕೆಳಗೆ ಮೇಲಾಗಿ ತಿರುಗುವದು ಏಕಚಕ್ರದಲ್ಲಿ ॥[2]**

ಏನೇನೋ ಲೆಕ್ಕ ಹಾಕಿ ಜೀವವನ್ನು ಹಿಡಿದುಕೊಂಡಿದ್ದೇನೆ. ಸುಭಗಳೇ, ನೀನು ಭಯಗೊಂಡು ಸಾಯಬೇಡ. ಹೇಗೋ ಕಾಲವನ್ನು ನೂಕುತ್ತ ಕಳೆ. ಪ್ರಿಯೆಯೇ ಈ ಲೋಕದಲ್ಲಿ ಯಾರು ಬರಿಯ ಸುಖ, ಬರಿಯ ದುಃಖವಷ್ಟೇ ಪಟ್ಟಿದ್ದಾರೆ ಹೇಳು? ಏಕಚಕ್ರದಲ್ಲಿಯ ಎಡೆಯು ಮೇಲೆ ಕೆಳಗಾಗಿ ತಿರುಗುತ್ತದೆ, ಹಾಗೆ ಅದೃಷ್ಟ!

47

**ಹಾವು ಹಾಸಿಗೆಯ[3] ಹರಿಯು ತೊರೆವ ದಿನ ಶಾಪ ಮುಗಿಯಲಹುದು[4]**
**ನಾಲ್ಕು ತಿಂಗಳನು ಕಣ್ಣು ಮುಚ್ಚಿ ನೀನಿನ್ನು ಕಳೆಯಬಹುದು ॥**
**ಬಳಿಕ ಬರುವೆ, ಇನ್ನುಳಿದ ಬಯಕೆಗಳು ಇರಲಿ ಏಕೆ ಚಿಂತೆ?**
**ಬೆಳೆವ ತಿಂಗಳಲಿ ಇರುಳು ಇರುಳುಗಳ ಅದಕೆ ಕಳೆವೆವೆಂತೆ ॥[5]**

ನನ್ನ ಶಾಪವು ಹರಿಯು ಹಾವು ಹಾಸಿಗೆಯನ್ನು ಬಿಟ್ಟು ಏಳುವ ದಿನಕ್ಕೆ ಮುಗಿಯುತ್ತದೆ. ಹೇ ಪ್ರಿಯೆ, ನಾಲ್ಕು ತಿಂಗಳನ್ನು ನೀನಿನ್ನು ಕಣ್ಣು ಮುಚ್ಚಿ ಕಳೆಯಬಹುದು. ಅನಂತರ ನಾನು ಬರುತ್ತೇನೆ. ಇನ್ನು ಉಳಿದ ಬಯಕೆಗಳು ಇರಲಿ. ಅದಕ್ಕೇಕೆ ಚಿಂತೆ? ಅವೆಲ್ಲವನ್ನೂ

---

[1] ನಾನು ಚಿಂತಿಸುತ್ತಿದ್ದೇನೆಂದು ನೀನೂ ಕೂಡ ಚಿಂತಿಸಬೇಡ.

[2] ತಾನೇ ದುಃಖದಲ್ಲಿ ಮುಳುಗಿರುವ ಯಕ್ಷ ಇಲ್ಲಿ ಹೆಂಡತಿಗೆ ಸಾಮಾಧಾನದ ಮಾತುಗಳನ್ನು ನುಡಿಯುತ್ತಿರುವುದು, ತತ್ವಜ್ಞಾನಿಯಂತೆ ಮಾತನಾಡುತ್ತಿರುವುದು ಅಸಹಜವೇನಲ್ಲ. ಇಂತಹ ಸಮಾಧಾನದ ನುಡಿಗಳನ್ನು ಆಡುವ ಮೂಲಕ ಅವನು ತನ್ನದೇ ದುಃಖವನ್ನು ಶಮನ ಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದಾನೆ.

[3] ಮೂಲದಲ್ಲಿ ಬಳಸಿರುವ 'ಶೇಷ'ವೆಂಬ ಪದ ಶ್ಲೇಷಾರ್ಥವನ್ನು ಒಳಗೊಂಡಿದೆ. ಶೇಷವೆಂದರೆ ಹಾವು ಎಂಬ ಅರ್ಥವಿದೆ, ಜೊತೆಗೆ 'ಉಳಿದ' (ಇನ್ನೂ ನಾಲ್ಕು ತಿಂಗಳು ಉಳಿದಿವೆ) ಎಂಬ ಅರ್ಥವೂ ಇದೆ.

[4] ಮಹಾವಿಷ್ಣುವು ಆಷಾಢದ ಏಕಾದಶಿಯಂದು ಆದಿಶೇಷನ ಮೇಲೆ ಮಲಗಿದರೆ ಕಾರ್ತಿಕ ಮಾಸದ ಏಕಾದಶಿಯಂದು ಎದ್ದೇಳುತ್ತಾನೆ. ಅವನ ಈ ನಿದ್ರೆಯನ್ನು ಯೋಗನಿದ್ರೆ ಎಂದು ಕರೆಯುವರು. ಕಾರ್ತಿಕ ಏಕಾದಶಿಯನ್ನು ಪ್ರತಿಬೋಧಿನೀ ಏಕಾದಶಿ ಎಂದು ಕರೆಯುತ್ತಾರೆ (ಪ್ರತಿಬೋಧಿನಿ = ಎಚ್ಚರಗೊಳ್ಳುವುದು). ಈ ನಾಲ್ಕು ತಿಂಗಳ ಅವಧಿಯನ್ನು ಚಾತುರ್ಮಾಸ್ಯ ಎಂದು ಕರೆಯುತ್ತಾರೆ. ಯಕ್ಷನು "ಕಾರ್ತಿಕ ಮಾಸದ ಹೊತ್ತಿಗೆ ನಾನು ಶಾಪವಿಮುಕ್ತನಾಗುತ್ತೇನೆ, ನಾಲ್ಕು ತಿಂಗಳ ನಂತರ ನಾವು ಪುನಃ ಒಂದಾಗಬಹುದು" ಎನ್ನುತ್ತಿದ್ದಾನೆ.

[5] 'ಕಳೆವೆವೆಂತೆ' ಎಂಬ ಪದವೂ ಸಹ ಶ್ಲೇಷಾರ್ಥದಿಂದ ಕೂಡಿದೆ. ಇನ್ನು ನಾಲ್ಕು ತಿಂಗಳು ಕಾಯೋಣ ಎಂಬ ಅರ್ಥದ ಜೊತೆಗೆ. ಕಾಯುವಿಕೆಯ ಮೂಲಕವೇ ಪಕ್ವವಾಗೋಣ (ಕಳೆವುದು = ಪಕ್ವವಾಗುವುದು) ಎಂಬ ಅರ್ಥವೂ ಇದೆ.

ಅನಂತರದ ಬೆಳೆಯುವ ಚಂದ್ರನಲ್ಲಿ ರಾತ್ರಿಯನ್ನು ಕಳೆಯೋಣ ಎಂದು ನಿನ್ನ ಪ್ರಿಯ ಹೇಳಿದ್ದಾನೆ. ಮತ್ತೆ ಅದನ್ನೇನೋ ನೆನೆಸಿಕೊಂಡು ಹೀಗೆ ಹೇಳಿದನು :

48[1]

**ಒಮ್ಮೆ ನಿನಗೆ ದಿನದಂತೆ ಕೊರಳ ತಳಕಿರಿಸಿ ನಿದ್ದೆಯಂತೆ**
**ತೋಳದಿಂಬಿನಲಿ ಹೊರಳಿ ನೀನಳುತ[2] ಏಕೊ ಎದ್ದೆಯಂತೆ**
**ಕೇಳಕೇಳುತಿರೆ ಏನು ಎಂದು, ಒಳನಕ್ಕು ಅಂದೆಯಂತೆ**
**'ಕಂಡೆ ಕನಸಿನಲ್ಲಿ, ಕಳ್ಳ, ನೀನು ಯಾವಳನೊ ಕೂಡಿದಂತೆ'**

ಒಮ್ಮೆ ನೀನು ಪ್ರತಿದಿನದಂತೆ ಕೊರಳನ್ನು ಅವನ ತೋಳಿಗೊರಗಿಸಿ ನಿದ್ದೆ ಮಾಡಿದೆಯಂತೆ. ಆ ತೋಳ ದಿಂಬಿನಲ್ಲಿ ಹೊರಳುತ್ತ ಏಕೋ ಎದ್ದೆಯಂತೆ ಅವನು ಏಕೆ ಏನು ಎಂದು ಕೇಳುತ್ತಿರಲು ನೀನು ಒಳನಕ್ಕು ನುಡಿದೆಯಂತೆ – ಕಂಡೆ ಕನಸಿನಲ್ಲಿ, ಕಳ್ಳ, ನೀನು ಯಾವಳನ್ನೋ ಕೂಡಿದಂತೆ.

49

**ಕುಶಲನಿರುವೆ ನಾನಿಲ್ಲಿ ನಿನ್ನನೇ ನೆನೆದು ಧೈರ್ಯತಾಳಿ**
**ನೀನು ಕೂಡ ಎದೆಗೆಡಿಸಿಕೊಳ್ಳದಿರು[3] ಏನೊ ಸುದ್ದಿ ಕೇಳಿ ॥[4]**
**ಅಗಲಿದಾಗ ತಿನ್ನುವದು ಸ್ನೇಹವೆನ್ನುವರು ಜೀವವನ್ನು[5]**
**ಕೂಡಿದೊಡನೆ ಅದೆ ಸೂರೆ ಮಾಡುವದು ಪ್ರೇಮಭಾವವನ್ನು ॥[6]**

ಮತ್ತೆ ಈ ಮಾತನ್ನು ಹೇಳಿದ: ನಾನಿಲ್ಲಿ ನಿನ್ನನ್ನೇ ನೆನೆಯುತ್ತ ಕ್ಷೇಮದಿಂದಿದ್ದೇನೆ.

---

[1] ಹನುಮಂತ ನಿಜವಾಗಿಯೂ ರಾಮನ ದೂತನೋ ಅಥವಾ ಯಾರೋ ರಾಕ್ಷಸ ವಾನರ ರೂಪದಲ್ಲಿ ನನ್ನೊಂದಿಗೆ ನುಡಿಯುತ್ತಿರುವನೋ ಎಂಬ ಅನುಮಾನ ಸೀತೆಗೆ ಮೂಡಿತ್ತು. ಅಂತಹುದೇ ಅನುಮಾನ ಯಕ್ಷನ ಮಡದಿಗೂ ಮೂಡಬಾರದೆಂಬ ಕಾರಣಕ್ಕೆ ಯಕ್ಷ ಇಲ್ಲಿ ಅವರಿಬ್ಬರು ಏಕಾಂತದಲ್ಲಿದ್ದಾಗ ನಡೆದ ಒಂದು ಘಟನೆಯನ್ನು ಮೋಡದ ಮೂಲಕ ಅವಳಿಗೆ ತಿಳಿಸುತ್ತಿದ್ದಾನೆ.

[2] ಮೂಲದಲ್ಲಿ ಕಾಳಿದಾಸನು "ಅವಳು ಕನಸಿನಿಂದ ನಸುನಗುತ ಎಚ್ಚರಗೊಂಡಳು" (ಸಾಂತಹಾಸಂ) ಎಂದಿದ್ದಾನೆ. ಆದರೆ ಬೇಂದ್ರೆ "ಅವಳು ಅಳುತ್ತ ಎದ್ದಳು" ಎಂದು ಅನುವಾದಿಸಿದ್ದಾರೆ. ಕಾಳಿದಾಸ ಅವಳನ್ನು ಪ್ರೌಢೆಯಂತೆ ಚಿತ್ರಿಸಿದ್ದರೆ ಬೇಂದ್ರೆ ಮುಗ್ಧೆಯಂತೆ ಬಿಂಬಿಸಿದ್ದಾರೆ.

[3] ತಾನು ಕುಶಲನಾಗಿದ್ದೇನೆ, ಎದೆಗೆಡದೆ ನೆಮ್ಮದಿಯಾಗಿರು ಎಂಬುದರ ಪುರಾವೆಯಾಗಿ ಇಲ್ಲಿ ಯಕ್ಷ ಮೇಘನ ಮೂಲಕ ಸಂದೇಶ ಕಳಿಸಿದ್ದಾನೆ.

[4] ಅವನು ಅಗಲಿರುವುದನ್ನು ಗಮನಿಸಿದ ಜನ ಅವನ ಬಗ್ಗೆ, ಅವರಿಬ್ಬರ ಸಂಬಂಧದ ಬಗ್ಗೆ, ಅಮಂಗಳಕರವಾದ ಮಾತುಗಳನ್ನು ಆಡಿಕೊಳ್ಳುತ್ತಿದ್ದರೆನಿಸುತ್ತದೆ. (ಅವನು ಸತ್ತಿದ್ದಾನೆಂದೋ, ಅವಳನ್ನು ಮರೆತಿದ್ದಾನೆಂದೋ ಅಥವಾ ಅವನು ಪರಸ್ತ್ರೀ ಸಂಗದಲ್ಲಿ ಬಿದ್ದಿದ್ದಾನೆಂದೋ..)

[5] ಅಂತಹ ಅಮಂಗಳಕರವಾದ ಸುದ್ದಿಗಳನ್ನೇ ಸತ್ಯವೆಂದು ನಂಬಿದರೆ ಸಂಬಂಧ ಹದಗೆಡುತ್ತದೆ,

[6] ಅಗಲಿರುವ ಪ್ರೇಮಿಗಳು ಅಂತಹ ಪುಕಾರುಗಳಿಗೆ ಬೆಲೆಕೊಡದೇ ಪರಸ್ಪರರನ್ನು ನಿರೀಕ್ಷಿಸಿದಲ್ಲಿ ಅವರ ಸಂಬಂಧ ಹಳಸದೇ ಅವರ ಪ್ರೇಮಭಾವ ಇನ್ನಷ್ಟು ಹುಲುಸಾಗುವುದು.

ನೀನು ಕೂಡ ಏನೋ ಸುದ್ದಿ ಕೇಳಿ ಎದೆಗೆಡಿಸಿಕೊಳ್ಳಬೇಡ. ಅಗಲಿದಾಗ ಸ್ನೇಹವು ಜೀವ ತಿನ್ನುವುದೆಂದು ಹೇಳುವರು. ಕೂಡಿದೊಡನೆ ಅದು ಪ್ರೇಮಭಾವವನ್ನು ಸೂರೆ ಮಾಡುವುದು.

50

**ಮೊದಲ ವಿರಹದಲಿ ಬೆಂದ ಸಖಿಗೆ[1] ನೀ ಹೀಗೆ ಧೈರ್ಯ ಹೇಳಿ**
**ಶಿವನ ಬಸವನಗೆದಿರುವ ನಗದ ತುದಿಯಿಂದ ಕಾಲ ಕೀಳಿ ॥[2]**
**ಮರಳಿ ಬಂದು ಅವಳೊಸಗೆ ತಂದು ನನಗೊಂದು ಬಾಳ ನೀಡು**
**ಕಳಚಿ ಬೀಳಲಿಹ ಕುಂದಕುಸುಮದೊಲು[3] ಇಹುದು ನನ್ನ ಪಾಡು ॥**

ಈ ರೀತಿ ಮೊದಲ ವಿರಹದಲ್ಲಿ ಬೆಂದ ನನ್ನ ಸಖಿಗೆ ನೀನು ಧೈರ್ಯ ಹೇಳು. ಅನಂತರ ನೀನು ಶಿವನ ನಂದಿ ಅಗೆದಿರುವ ಪರ್ವತದ ತುದಿಯಿಂದ ಹೊರಡು. ಮರಳಿ ಬಂದು ಅವಳ ಶುಭ ಸಮಾಚಾರವನ್ನು ತಂದು ನನಗೊಂದು ಬಾಳು ನೀಡು. ಕಳಚಿ ಬೀಳಲಿರುವಂತಹ ಕುಂದ ಕುಸುಮದಂತೆ ನನ್ನ ಪಾಡು ಆಗಿದೆ.

51

**ಒಪ್ಪಿಕೊಂಡೆಯಾ, ಅಪ್ಪ, ಹೇಳು ಈ ಬಂಧುಕೃತ್ಯವನ್ನು**
**ಇಲ್ಲವೆಂದು ನಾ ತಿಳಿಯೇ ನಿನ್ನ ಗಂಭೀರ ಮೌನವನ್ನು ॥[4]**
**ನೀರ ನೀಡಿ ಚಾದಗೆಗೆ ಸುಮ್ಮನಿಹೆ ಬೇರೆ ಸಾಕ್ಷ್ಯ ಬೇಕೆ**
**ತಮ್ಮ ಇಷ್ಟದವರಿಷ್ಟ ಮಾಡುವವ ಬಾಯಲಾಡಲೇಕೆ? ॥**

---

[1] ಅವರಿಬ್ಬರೂ ಮದುವೆಯಾದ ಮೇಲೆ ಇದೇ ಮೊದಲ ಸಲ ಬೇರೆ ಬೇರೆಯಾಗಿ ಬಾಳುತ್ತಿರುವುದು.

[2] ನಂದಿ ಕೈಲಾಸದ ಶಿಖರಗಳನ್ನೇರಿ ತನ್ನ ಕೋಡಿನಿಂದ ಶಿಖರವನ್ನೆಲ್ಲ ಕೆತ್ತಿರುತ್ತಾನೆ. ಹಾಗೆ ಕೆತ್ತಲ್ಪಟ್ಟ ಶಿಖರಾಗ್ರದಿಂದ ಹಿಂದಿರುಗಿ ಬಾ.

[3] ಕಮಲದ ಹೂವು ಮುಂಜಾನೆ ಅರಳಿ ಸಂಜೆಗೆ ಬಾಡುತ್ತದೆ. ತೊಟ್ಟು ಕಳಚಿ ಅದರ ಪಕಳೆಗಳು ಉದುರುತ್ತವೆ. ನನ್ನ ಪಾಡೂ ಹಾಗೆಯೇ ಆಗಿದೆ.

[4] 'ಆಡದೆಯೆ ಮಾಡುವನು ರೂಢಿಯೊಳಗುತ್ತಮನು'. ನನ್ನ ಕೋರಿಕೆಗೆ ನೀನು ಬಾಯಲ್ಲಿ ಮಾರುತ್ತರ ನೀಡದಿದ್ದರೂ ಕೋರಿಕೆಯನ್ನು ಮನ್ನಿಸುವೆ ಎಂಬ ಭರವಸೆ ನನಗಿದೆ ಎನ್ನುತ್ತಿದ್ದಾನೆ.

ಯಕ್ಷನು ಮೋಡವನ್ನು ಜೀವವಿರುವ, ಬುದ್ಧಿಯಿರುವ ಒಂದು ಜೀವಿಯೆಂದು ಭಾವಿಸಿ ಅದರೊಂದಿಗೆ ಮಾತನಾಡುವುದು, ಅದರೊಂದಿಗೆ ತನ್ನ ಮನದಾಳದ ಅಸಲಿ ಭಾವನೆಗಳನ್ನು ಹಂಚಿಕೊಳ್ಳುವುದು, ಅದರಿಂದ ಮಾರುತ್ತರ ಅಪೇಕ್ಷಿಸುವುದು ಇವೆಲ್ಲ ಮೇಲ್ನೋಟಕ್ಕೆ ಅಸಂಗತವಾಗಿ ತೋರಿದರೂ ಆಳದಲ್ಲಿ ಔಚಿತ್ಯಪೂರ್ಣ ಧ್ವನಿಯಿದೆ. ಒಂದು ವೇಳೆ ಮೋಡ ಮಾರುತ್ತರ ನೀಡಿದ್ದರೆ, ಸಂದೇಶವನ್ನು ಒಯ್ಯುತ್ತೇನೆಂದಾಗಲಿ, ಒಯ್ಯುವುದಿಲ್ಲವೆಂದಾಗಲಿ ಹೇಳಿದ್ದರೆ ಆಗ ಇಡೀ ಕಾವ್ಯ ಅಸಂಗತವಾಗಿ ತೋರುತ್ತಿತ್ತು. ಮೋಡದ ಮೌನವೇ ಕಾವ್ಯಕ್ಕೆ ಅರ್ಥಪೂರ್ಣತೆ ನೀಡಿದೆ. ಹಾಗೆ ನೋಡಿದರೆ ಮೋಡ ಮಾರುತ್ತರ ನೀಡುವುದಿಲ್ಲ ಎಂಬುದು ಯಕ್ಷನಿಗೆ ಚೆನ್ನಾಗಿಯೇ ಗೊತ್ತಿದೆ (ಎತ್ತ ಮಾತುಗಳು? ಮೋಡ ಜೀವವೇ? ಏನೋ ಎತ್ತೊ ಚಿತ್ತ ? ಪೂರ್ವಮೇಘ 5)

ಇಷ್ಟು ಹೇಳಿದ ಯಕ್ಷನು ಮೋಡವನ್ನು "ಅಪ್ಪ, ಈ ಬಂಧುವಿನ ಕೆಲಸವನ್ನು ಒಪ್ಪಿಕೊಂಡೆಯಾ ಹೇಳು" ಎಂದು ನುಡಿಯುತ್ತ "ನಿನ್ನ ಗಂಭೀರ ಮೌನವನ್ನು ಕಂಡು ಸಮ್ಮತಿಸಿಲ್ಲ ಎಂದು ನಾನು ತಿಳಿಯಲಾರೆ. ಮಳೆಯ ಹನಿಗಳನ್ನು ಬಾಯೊಡ್ಡಿಕುಡಿದು ಬಾಯಾರಿಕೆ ತೀರಿಸಿಕೊಳ್ಳುವ ಚಾತಕ ಪಕ್ಷಿಯಂತಹ ನನಗೆ ನೀನು ನೀರನ್ನು ನೀಡಿರುವೆ; ಸುಮ್ಮನಿರುವೆ. ತಮ್ಮ ಪ್ರಿಯರಾದವರ ಇಷ್ಟವನ್ನು ನೆರವೇರಿಸುವವರು ಬಾಯಿಂದ ಮಾತನ್ನೇಕೆ ಆಡುವರು?" ಎಂದು ಸಮಾಧಾನ ಗೊಂಡನು. ಮತ್ತೆ ಮಾತನ್ನು ಸಲಿಗೆಯಲ್ಲಿ ಮುಂದುವರಿಸಿ ಹೇಳಿದನು:

52

**ಸಿಕ್ಕ ಹಾಗೆ ನಾ ಬೇಡಿಕೊಂಡೆ[1] ಮಾಡಿಷ್ಟು ನನ್ನದನ್ನು**
**ಎನ್ನು ಗೆಳೆಯನಿವ, ಎನ್ನು ಅಗಲಿದವ, ಅಯ್ಯೋ ಪಾಪ ಎನ್ನು ॥**
**ತಿಳಿದ ನಾಡು ತಿರುಗಾಡು ಮೇಘವೇ ಮಾಟ ಆಟವಾಡಿ;**
**ಬೇಡಿಕೊಂಬೆ ನಾ ಇರಲಿ ಎಂದಿಗೂ ಮೋಡ ಮಿಂಚುಗೂಡಿ ॥[2]**

ಹೇ ಮೇಘರಾಜ ನಿನ್ನನ್ನು ಸಿಕ್ಕ ಹಾಗೆ ಬೇಡಿಕೊಂಡಿರುವೆ. ನನ್ನ ಇಷ್ಟು ಬಯಕೆಯನ್ನು ನೆರವೇರಿಸು. ನನ್ನ ಗೆಳೆಯನಿವನು, ಪತ್ನಿಯಿಂದ ಅಗಲಿದವನು ಅಯ್ಯೋ ಪಾಪ ಎಂದು ಏನಾದರೂ ಹೇಳು. ನಲ್ಮೆಯ ನೇಹಿಗನೇ ತಿಳಿದ ನಾಡಿನಲ್ಲಿ ಮಾಟ ಆಟ ಆಡಿ ತಿರುಗಾಡುವವನೇ, ನಾನು ಅನಂತ ಚೈತನ್ಯದಲ್ಲಿ ಬೇಡಿಕೊಳ್ಳುವುದಿಷ್ಟೇ; ಎಂದಿಗೂ ಮೋಡ ಮಿಂಚುಗೂಡಿ ಇರಲಿ".



---

[1] ಇದೊಂದು ಪ್ರಾರ್ಥನೆಯಾದರೂ ಲೋಕದಲ್ಲಿ ಈವರೆಗೆ ಯಾರೂ ಮಾಡಿರದ, ಎಂದೂ ಸಂಭವಿಸಿರದ ಪ್ರಾರ್ಥನೆಯಾಗಿದೆ.

[2] ಮಾಮೂಲಿ ಪ್ರಾರ್ಥನೆಯಲ್ಲಿ ಬಿನ್ನಹವಿದ್ದರೆ ಯಕ್ಷನ ಪ್ರಾರ್ಥನೆಯಲ್ಲಿ ಅನುಗ್ರಹವಿದೆ. ನೀನು ಮತ್ತು ನಿನ್ನ ಮಡದಿ (ಮಿಂಚು) ಸದಾ ಕಾಲ ಜೊತೆಗೂಡಿ ಬಾಳ್ವೆ ಮಾಡಿ ಎಂದು ಮೋಡವನ್ನು ಅನುಗ್ರಹಿಸುತ್ತಿದ್ದಾನೆ. ಪ್ರಾರ್ಥಿಸುವವನು ಬೇಡುವ ಭಿಕ್ಷುಕನಾಗಬಾರದು, ನೀಡುವ ಅನುಗ್ರಹಿಯಾಗಬೇಕು ಎಂಬ ಸಂದೇಶವಿದೆ.

# ಕೃತಜ್ಞತೆ

ನನ್ನ ಮನದ ಕಜ್ಜಳವ ಕಳೆದು ಹೊಸ ಬೆಳಕು ಹೊತ್ತಿ ಕುಡಿಗೆ
ನಾನು ಹಿಗ್ಗಿದೆನು ನಿನ್ನ ಕೃತಿಯನಿಟ್ಟಂತೆ ನನ್ನ ಮುಡಿಗೆ ॥
"ಹೋಗು ಸುಕವಿ–ರಸ–ದಾಸಿಯಾಗಿ ದುಡಿ" ಎಂದೆ ನನ್ನ ನುಡಿಗೆ
ಮಾತಿನಲ್ಲೆ ಮೂಲೋಕ ಸೃಜಿಸುವಾ ನಿನ್ನ ಪ್ರತಿಭೆಯಡಿಗೆ ॥

ಹಿಂದಾಗಲಿಲ್ಲ, ಮುಂದಾಗಲಾರ, ಕವಿ ಕಾಳಿದಾಸ ನೀನು
ಶೃಂಗಾರದಿಂದೆ ನವಭಕ್ತಿ ರಸವ ಹೊಮ್ಮಿಸುವ ದಿವ್ಯಭಾನು ॥
ರಸವತಿಯು ನಿನ್ನ ಸರಸತಿಯು, ಸವಿಗೆ ತುಟಿಮುದ್ದು ಹಾಲು ಜೇನು
ಕನ್ನಡದೊಳಿಂದು ಕನ್ನಡಿಸಿದಂತೆ ಮೂಡಿರುವಳಿಲ್ಲಿ ತಾನು ॥

# ಉತ್ತರ ಮೇಘದ ಸಾರ

ಆ ನಗರದಲ್ಲಿ (ಅಲಕೆಯಲ್ಲಿ) ಭವನಗಳು ಮುಗಿಲು ಮುಟ್ಟುತ್ತವೆ. ಆ ಭವನಗಳ ತಾರಸಿಗಳು ಮತ್ತು ಗೋಡೆಗಳು ಮುತ್ತುರತ್ನಗಳಿಂದ ಅಲಂಕೃತವಾಗಿವೆ. ಆ ಮಾಳಿಗೆ ಮತ್ತು ಗೋಡೆಗಳಿಂದ ಸದಾಕಾಲ ಸಂಗೀತದ ನಾದ ಹೊರಹೊಮ್ಮುತ್ತದೆ. ಅಲ್ಲಿ ನವಿಲುಗಳು ಯಾವಾಗಲೂ ನರ್ತಿಸುತ್ತಿರುತ್ತವೆ. ಅಲ್ಲಿನ ಮನೆಗಳಲ್ಲಿ ಐಶ್ವರ್ಯ ತುಂಬಿ ತುಳುಕುತ್ತಿವೆ, ಮನೆಯ ಅಂಗಳಗಳು ಮುತ್ತುರತ್ನಗಳ ಪ್ರಭೆಯಿಂದಾಗಿ ಕತ್ತಲೆಯಲ್ಲೂ ಬೆಳಗುತ್ತಿರುತ್ತವೆ. ಅಲ್ಲಿನ ಹೆಂಗಸರಿಗೆ ಕಲ್ಪವೃಕ್ಷಗಳೇ ಅವರಿಗೆ ಬೇಕಾದ ಒಡವೆ ವಸ್ತುಗಳನ್ನು ದಯಪಾಲಿಸುತ್ತವೆ. ಇಂತಹ ನಗರದಲ್ಲಿ ಕುಬೇರನ ಮನೆಯ ಉತ್ತರ ದಿಕ್ಕಿನಲ್ಲಿ ಯಕ್ಷನ ಮನೆ ಇದೆ. ಮನೆಗೆ ರತ್ನಖಚಿತವಾದ ಹೊಸ್ತಿಲಿದೆ. ಮುತ್ತುರತ್ನಗಳಿಂದ ಅಲಂಕೃತವಾದ ಮೆಟ್ಟಿಲುಗಳಿವೆ, ಆ ಮನೆಯ ಅಂಗಳದ ಕೊಳದಲ್ಲಿ ಚಿನ್ನದ ತಾವರೆ ಅರಳುತ್ತದೆ. ಮನೆಯ ಆಚೆಗಿರುವ ಬೆಟ್ಟದಲ್ಲಿ ಚಿನ್ನದ ದೇವದಾರು ವೃಕ್ಷಗಳಿವೆ. ಮನೆಯ ಮುಂಭಾಗದಲ್ಲಿ ಅಶೋಕ ಮತ್ತು ಬಕುಳ ವೃಕ್ಷಗಳಿವೆ. ಅವುಗಳ ಮಧ್ಯೆ ಅವನ ಮಡದಿ ಆಡಿಸುವ ನವಿಲಿಗೆಂದೇ ಕಟ್ಟೆಯೊಂದನ್ನು ಕಟ್ಟಲಾಗಿದೆ. ಮೋಡ ತನ್ನ ಮನೆಯನ್ನು ಸರಿಯಾಗಿ ಗುರುತಿಸಲೆಂದು ಇವಿಷ್ಟು ವಿವರಗಳನ್ನು ಯಕ್ಷ ನೀಡುತ್ತಿದ್ದಾನೆ.

ಆದರೆ ಈಗ ಮನೆಯೊಡೆಯನಿಲ್ಲದ ಕಾರಣ ಮನೆ ಕಳೆಗುಂದಿದೆ. ಇಂತಹ ಮನೆಯಲ್ಲಿ ಯಕ್ಷನ ಮಡದಿ ಏಕಾಂಗಿಯಾಗಿ ದುಃಖದಿಂದ ಕಣ್ಣೀರಿಡುತ್ತಿದ್ದಾಳೆ. ಈ ವಿರಹ ಕಳೆಯಲು ಇನ್ನೂ ಎಷ್ಟು ಕಾಲ ಉಳಿದಿದೆ ಎಂದು ಅವಳು ತಿಂಗಳುಗಳನ್ನು ಎಣಿಸುತ್ತಿರುತ್ತಾಳೆ, ಇಲ್ಲವೇ ವಿರಹದ ದುಃಖವನ್ನು ನೀಗಿಸಿಕೊಳ್ಳಲು ಸಂಗೀತದಲ್ಲಿ ಮುಳುಗಲು ವ್ಯರ್ಥ ಪ್ರಯತ್ನ ಮಾಡುತ್ತಿರುತ್ತಾಳೆ. ವಿರಹದ ಬೇಗೆಗೆ ಬೆಂದು ಅವಳು ಸಣ್ಣಗಾಗಿರಬೇಕು, ಎಲ್ಲ ಸುಖಭೋಗಗಳ ಬಗ್ಗೆ ಜಿಗುಪ್ಸೆ ಬೆಳೆಸಿಕೊಂಡಿರಬೇಕು, ಎಲ್ಲ ವಿಷಯಗಳಲ್ಲೂ ನಿರಾಸಕ್ತಿ ತಳೆದಿರಬೇಕು ಎಂದು ಯಕ್ಷ ಆತಂಕಿಸುತ್ತಾನೆ.

ಹೀಗೆ ಸಂಕಟದಲ್ಲಿರುವ ಅವಳನ್ನು ಭೇಟಿಮಾಡಿ ತನ್ನ ಗಂಭೀರ ಧ್ವನಿಯಿಂದ ಅವಳಿಗೆ ಸಂದೇಶದ ವಾಕ್ಯಗಳನ್ನು ನುಡಿಯಬೇಕೆಂದು ಯಕ್ಷ ಮೋಡಕ್ಕೆ ಸೂಚಿಸುತ್ತಾನೆ.

ಮೋಡದ ನುಡಿಗಳು ಅವಳಲ್ಲಿ ಧೈರ್ಯ ಮತ್ತು ಸಮಾಧಾನ ನೀಡುತ್ತವೆ. ತಾನು ಕೂಡ ಅವಳ ಪ್ರೀತಿಗಾಗಿ ಕಾತರಿಸುತ್ತಿದ್ದು, ಇಷ್ಟರಲ್ಲೇ ಭೇಟಿಯಾಗುವ ಭರವಸೆ ಹೊಂದಿದ್ದೇನೆ ಧೃತಿಗೆಡದಿರು ಎಂದು ಮೋಡ ಅವಳಿಗೆ ತಿಳಿಸಬೇಕೆಂದು ಸೂಚಿಸುತ್ತಾನೆ. ಮಳೆಗಾಲ ಮುಗಿಯುವ ಹೊತ್ತಿಗೆ ಶಾಪಗ್ರಸ್ತ ದಿನಗಳೂ ಕೊನೆಗೊಳ್ಳುತ್ತವೆ. ಆದ್ದರಿಂದ ಪುನಃ ಒಂದಾಗಲು ಕೇವಲ ನಾಲ್ಕು ತಿಂಗಳು ಕಾಯಬೇಕೆಂಬ ಸಾಂತ್ವನದ ನುಡಿಗಳನ್ನು ಮೋಡದಿಂದ ಹೇಳಿಸುತ್ತಾನೆ. ಅವಳ ಕ್ಷೇಮ ಸಮಾಚಾರವನ್ನು ಹೊತ್ತು ಹಿಂದಿರುಗುವಂತೆ ಯಕ್ಷ ಮೋಡಕ್ಕೆ ಬಿನ್ನವಿಸುತ್ತಾನೆ. "ನನ್ನಂತೆ ನಿನಗೆ ನಿನ್ನ ಮಡದಿಯಿಂದ (ಮಿಂಚಿನಿಂದ) ಅಗಲುವ ಪರಿಸ್ಥಿತಿ ಕ್ಷಣಕಾಲವೂ ಬಾರದಿರಲಿ" ಎಂದು ಮೋಡಕ್ಕೆ ಹಾರೈಸುತ್ತಾನೆ.



# ಕನ್ನಡ ಮೇಘದೂತ - ಪದಾರ್ಥ ಕೋಶ

ಅಚ್ಚ (ಗು) ನಿರ್ಮಲ, ಶುದ್ಧ, ಬೆರಕೆ ಇಲ್ಲದ, ಅಪ್ಪಟ, ಒಳ್ಳೆಯ

ಅಣಿ (ನಾ). ಅಚ್ಚುಕಟ್ಟು, ಸೊಗಸು, ಮನೋಹರತೆ, ಅಲಂಕಾರ

ಅನಂಗ (ನಾ). ಮನ್ಮಥ

ಅಮರಿ, ಅಮರಸ್ತ್ರೀ (ನಾ). ದೇವರಮಣಿ, ಅಪ್ಸರೆ

ಅರಳು (ನಾ). ಹೂವು, ಪುಷ್ಪ

ಅರೆ (ನಾ). ಕಲ್ಲುಬಂಡೆ, ದೊಡ್ಡ ಶಿಲೆ, ಕಲ್ಲುಗುಂಡು

ಅಲಸು (ನಾ). ಬಳಲಿಕೆ, ದಣಿವು

ಅಸರಂತ (ಗು) (ಉ.ಕ.) ಅವಿಶ್ರಾಂತವಾದ; ನಿರಂತರವಾದ

ಆಚಾರ (ನಾ). (ವ್ಯಕ್ತಿ ಧಾರ್ಮಿಕ ಜೀವನದಲ್ಲಿ ಅನುಸರಿಸಬೇಕಾದ ಮತ ಸಂಬಂಧವಾದ) ಕಟ್ಟುಪಾಡು, ನಿಯಮ, ಸಂಪ್ರದಾಯ

ಆಲಪ, ಆಳಾಪ (ನಾ). ಮಾತು, ಸಂಭಾಷಣೆ, ಸಲ್ಲಾಪ

ಆಸರ್, ಆಸರು (ಕ್ರಿ) ಬಳಲು ಆಯಾಸ ಪಡು, ದಣಿ

ಇಂದು (ನಾ). ಚಂದ್ರ

ಇಂಪು (ನಾ). ಸವಿ, ರುಚಿ, ಸೊಗಸು, ಮಾಧುರ್ಯ

ಈಡು (ನಾ). ಸರಿ; ಸಮಾನ; ಸೌಮ್ಯ; ಹೊದಿಕೆ

ಉಗಿ, ಉಗೆ (ನಾ). ನೀರಿನ ಹಬೆ, ಆವಿ

ಉಡೆ, ಉಡಿ (ನಾ). ಸೊಂಟ,ಟೊಂಕ, ನಡು, ಕಟಿ

ಉತ್ಕಂಠ (ನಾ). ವಿಯೋಗದಿಂದ ಉಂಟಾಗಿರುವ ದುಃಖ, ಉದ್ವಿಗ್ನತೆ

ಉದ್ಗಾರ (ನಾ). (ಭಾವಾವೇಶದಿಂದ ಕೂಡಿದ) ಮಾತು, ಕೂಗು

ಉರಿ (ನಾ). (ಅಲಂ) ಸಂತಾಪ, ಸಂಕಟ

ಉರು (ಗು.) ವಿಶೇಷವಾದ, ವಿಸ್ತಾರವಾದ, ಹೆಚ್ಚಿನ

ಊನ (ನಾ). ಕಡಿಮೆಯಾಗಿರುವುದು, ಕುಂದು, ಕೊರತೆ

ಒಗ್ಗು (ಕ್ರಿ). ಹರಿ; ಪ್ರವಹಿಸು

ಒಟ್ಟಯಿಸು, ಒಟ್ಟಿಸು (ಕ್ರಿ) ಒಟ್ಟುಗೂಡಿಸು, ಕೂಡಿಸು, ರಾಶಿ ಮಾಡು

ಒಟ್ಟಿಲು (ನಾ). ರಾಶಿ ಗುಂಪು, ಸಮೂಹ

ಒದವು (ನಾ). ಅಭಿವೃದ್ಧಿ, ಏಳಿಗೆ, ಆಧಿಕ್ಯ, ಹೆಚ್ಚಳ

ಒಪ್ಪ (ನಾ). ಅಚ್ಚುಕಟ್ಟು; ಓರಣ

ಒಮ್ಮಿ, ಒಕ್ಕು, ಒಗ್ಗು, (ಕ್ರಿ). ಹರಿ; ಪ್ರವಹಿಸು

ಒಸಗೆ (ನಾ). ಶುಭ ಸಮಾಚಾರ, ಸಂದೇಶ, ಸುದ್ದಿ

ಓಘ (ನಾ). ಪ್ರವಾಹ; ನೆರೆ

ಕಡವಾಲ (ನಾ). ಒಂದು ಜಾತಿಯ ಮರ; ಕಡಂಬ; ಕೇಸರಿ ಬಣ್ಣದ ಸುವಾಸನೆಯ ಹೂ ಬಿಡುವ ಒಂದು ಬಗೆಯ ಮರ; ಕದಂಬ ವೃಕ್ಷ

ಕನಖಲ (ನಾ). ಸಪ್ತ ಗಂಗೆಯ ಸಮೀಪದ ತೀರ್ಥ, ಹರಿದ್ವಾರದಿಂದ ಎರಡು ಮೈಲಿ ಪೂರ್ವದಲ್ಲಿರುವ ಸಣ್ಣ ಗ್ರಾಮ

ಕಬ್ಬ (ನಾ). ಕಾವ್ಯ, ಕವನ

ಕಮರು (ಕ್ರಿ). ಬಾಡು, ಕುಂದು, ಒಣಗು, ಬತ್ತು

ಕರ (ನಾ). 1. ಆನೆಯ ಸೊಂಡಿಲು, 2. ನೀರು, 3. ಮೋಡ

ಕರಣ (ನಾ). ಒಡಲು, ಮೈ

ಕಲ್ಬಾಳೆ, ಕಲ್ವಾಳೆ, ಕಲ್ಲುಬಾಳೆ (ನಾ). ಒಂದು ಬಗೆಯ ಬಾಳೆ

ಕಲ್ಮಾಡ, ಕಲ್ಲುಮಾಡ (ನಾ). ಕಲ್ಲಿನಿಂದ ಕಟ್ಟಿದ ಉಪ್ಪರಿಗೆ, ಕಲ್ಲಿನ ಮನೆ

ಕಸ್ತೂರಿ (ನಾ). ಕಸ್ತೂರಿ ಮೃಗದ ನಾಭಿಯಿಂದ ದೊರೆಯುವ ಸುಗಂಧ ದ್ರವ್ಯ

ಕಾಂತ (ನಾ). ಸೂಜಿಗಲ್ಲು, ಅಯಸ್ಕಾಂತ

ಕಾಕ (ನಾ). 1. ಕಾಗೆ; ವಾಯಸ 2. (ಅಲಂ.) ದುಷ್ಟ ನೀಚ

ಕಾಮರೂಪಿ (ನಾ). ಇಷ್ಟ ಬಂದ ರೂಪವನ್ನು ಧರಿಸಬಲ್ಲವನು

ಕಾರಣೆ (ನಾ). ಮನೆಯ ಗೋಡೆಯ ಕೆಳಭಾಗದಲ್ಲಿ ಬಣ್ಣದಿಂದ ಎಳೆಯುವ ಗೆರೆ, ಮೇಜು ಕಟ್ಟು

ಕಾವು, ಕಾಮು (ನಾ). ದಂಟು, ನಾಳು, ದೇಟು

ಕಿರುಕುಳ (ನಾ). ಹೀನಕುಲದವನು; ಕ್ಷುದ್ರ; ಅಲ್ಪ

ಕೀಳು (ಕ್ರಿ) ತೆಗೆದು ಹಾಕು, ಮೀಟಿ ಎಬ್ಬಿಸು, ನಿರ್ಮೂಲಿಸು, ಮೂಲೋತ್ಪಾಟನೆ ಮಾಡು.

ಕುಂದ (ನಾ).ಒಂದು ಜಾತಿಯ ಮಲ್ಲಿಗೆ,ಮೊಲ್ಲೆ, ಕೋಲು ಮಲ್ಲಿಗೆ

ಕುತ್ತ (ನಾ). ತೊಂದರೆ, ಅಪಾಯ, ಕೇಡು, ವಿಪತ್ತು, ಗಂಡಾಂತರ

ಕುತಕ (ನಾ). ಆಶ್ಚರ್ಯ, ಬೆರಗು, ವಿಸ್ಮಯ

ಕುತುಕ (ನಾ). ಕುತೂಹಲ; ಆತುರ, ಉತ್ಸಾಹ

ಕುರುವಕ, ಕುರವಕ (ನಾ). ಕೆಂಪು ಹೂವಿನ ದೊಡ್ಡ ಗೋರಂಟಿ, ಮದರಂಗಿ ಗಿಡ

ಕುರುಳು (ನಾ). ಕೂದಲು, ಸುರುಳಿಗೂದಲು, ಮುಂಗೂದಲು, ಗುಂಗುರುಗೂದಲು

ಕುರುಳು (ನಾ). ಮುಂಗೂದಲು

ಕುಳಿರ್, ಕುಳಿರು (ನಾ). ಚಳಿ ತಂಪು ಶೈತ್ಯ

ಕಲಾರ್ (ಕ್ರಿ). ಕೂರ್ತ (ಭೂತಕೃ). 1. ಕುಳಿತುಕೊಳ್ಳು; ಆಸೀನವಾಗು. 2. ಪ್ರೀತಿಸು; ಒಲವು ತೋರು

ಕೃಷ್ಣವರ್ಣ (ನಾ). ಕರಿಯ ಬಣ್ಣ, ಕಪ್ಪುಬಣ್ಣ

ಕೆಂಗಾವಿ (ನಾ). ಕೆಂಪು ಬಣ್ಣದ ಮಣ್ಣು

ಕೆಚ್ಚು (ಕ್ರಿ). ಸೇರಿಸು,ಹೊಂದಿಸು

ಕೆದರು (ಕ್ರಿ) ಚೆಲ್ಲಾಪಿಲ್ಲಿಯಾಗು, ಬೇರೆಬೇರೆಯಾಗು, ಚೆದರಿ ಹೋಗು

ಕೆಲ (ನಾ). ಪಕ್ಕ, ಬದಿ, ಮಗ್ಗುಲು, ನೆರೆ, ಸನಿಹ

ಕೇಕಿ (ನಾ). ನವಿಲು, ಮಯೂರ

ಕೇಸರ (ನಾ). ಬಕುಲ, ವಕುಳದ ವೃಕ್ಷ

ಕೊಂಚೆ (ನಾ). ಒಂದು ಬಗೆಯ ಪಕ್ಷಿ, ಕ್ರೌಂಚ

ಕೋಕ (ನಾ). ಒಂದು ಪಕ್ಷಿ, ಚಕ್ರವಾಕ, ಕೋಗಿಲೆ

ಕೋರೆ (ಗು) ಓರೆಯಾದ, ವಕ್ರವಾದ, ಸೊಟ್ಟಾದ

ಗಂಧ (ನಾ). ಆನೆಯ ಮದೋದಕ;ಗಂಧಗಜ, ಗಂಧಾಂಧ

ಗಂಧಗಜ (ನಾ). ಮದೋದಕವನ್ನು ಸುರಿಸುವ ಆನೆ; ಒಂದು ಬಗೆಯ ಶ್ರೇಷ್ಠ ಜಾತಿಯ ಆನೆ

ಗಂಧವತಿ (ನಾ). 1. ಗಂಧವನ್ನು ಉಳ್ಳದು, ಭೂಮಿ, ಧರಿತ್ರಿ 2. ಒಂದು ಬಗೆಯ ಸುಗಂಧ ದ್ರವ್ಯ

ಗಣಿಕೆ (ನಾ). ವೇಶ್ಯೆ, ಸೂಳೆ, ಜಾರೆ

ಗಳಿಗೆ, ಘಳಿಗೆ (ನಾ). ಒಂದು ದಿವಸದ ಅರವತ್ತನೆಯ ಒಂದು ಭಾಗ, ಇಪ್ಪತ್ತನಾಲ್ಕು ನಿಮಿಷಗಳು

ಗಾಂಡೀವ ಧನ್ವ (ನಾ). ಅರ್ಜುನನ ಬಿಲ್ಲು, ಖಂಡವ ದಹನ ಕಾಲದಲ್ಲಿ ಅಗ್ನಿದೇವನು ಅರ್ಜುನನಿಗೆ ಪಾರಿತೋಷಕವಾಗಿ ಕೊಟ್ಟ ಧನುಸ್ಸು

ಗಾಂಧರ್ವ (ನಾ). ಸಂಗೀತ, ಹಾಡು, ಗಾನ

ಗಾವ, ಗಾಮ (ನಾ). ಹಳ್ಳಿ, ಗ್ರಾಮ

ಗುಂಭ (ನಾ). ಆಳ, ಗಾಂಭೀರ್ಯ

ಚಂಡಿ (ನಾ). 1. ಹಟಮಾರಿಯಾದ ಹೆಣ್ಣು, ಮೋಂಡಿ 2. ಹೆಣ್ಣು, ಹೆಂಗಸು, ಮಡದಿ

ಚಕ್ರವಾಕ (ನಾ). ಒಂದು ಬಗೆಯ ಪಕ್ಷಿ, ಬಿಸಿಲು ಹಕ್ಕಿ, ಜಕ್ಕವಕ್ಕಿ

ಚಲ, ಚಳ (ಗು) ಅಲುಗುವ, ನಡುಗುವ, ಚಂಚಲವಾದ ಅಸ್ಥಿರವಾದ

ಚಾದಗೆ, ಜಾದಗೆ, ಜಾತಕ (ನಾ). ಮಳೆಯ ನೀರಿನ ಆಧಾರದಿಂದೇ ಬದುಕುವುದೆಂದು ನಂಬಲಾದ ಪಕ್ಷಿ, ಮಳೆಯ ಹನಿಗಳನ್ನು ಬಾಯೊಡ್ಡಿ ಕುಡಿದು ಬಾಯಾರಿಕೆಯನ್ನು ತೀರಿಸಿಕೊಳ್ಳುವ ಒಂದು ಬಗೆಯ ಪಕ್ಷಿ

ಚಿಗುರು (ಕ್ರಿ) 1. ಅಂಕುರಿಸು, ಪಲ್ಲವಿಸು, ಮೊಳಕೆಯಾಗು, 2. ಉತ್ಸಾಹಗೊಳ್ಳು

ಚಿತ್ತಯಿಸು, ಚಿತ್ತಯ್ಸು, ಚಿತ್ತವಿಸು, ಚಿತ್ತೈಸು (ಕ್ರಿ) 1. ಮನಸ್ಸಿಗೆ ತಂದುಕೊಳ್ಳು, ಲಕ್ಷಿಸು, ಗಮನಿಸು 2. (ಅಲಂ) ದಯಮಾಡು, ಆಗಮಿಸು ಅಥವಾ ಹೋಗು

ಚೆಂಡು, ಸೆಂಡು (ನಾ). ತಲೆ, ಶಿರಸ್ಸು

ಚೈತ್ರರಥ (ನಾ). ಅಲಕಾನಗರದ ವನ, ಕುಬೇರನ ಉದ್ಯಾನ

ಜಲದ, ಜಳದ (ನಾ). ನೀರನ್ನು ನೀಡುವುದು, ಮೋಡ, ಮೇಘ

ಜವ್ವನಿ, ಜವ್ವನೆ, ಯೌವ್ವನೆ (ನಾ). ಯುವತಿ, ತರುಣಿ

ಜಾಲಂದರ, ಜಾಳಾಂದ್ರ, ಜಾಳಾಂದರ (ನಾ). 1. ಬಲೆಯಂತೆ ಕಿಂಡಿಗಳನ್ನು ಉಳ್ಳ ರಚನೆ, ಕಿಂಡಿಗಳ ಚೌಕಟ್ಟು, 2. ಕಿಟಕಿ, ಗವಾಕ್ಷ

ಜಾವ (ನಾ). ದಿವಸದ ಎಂಟನೆಯ ಒಂದು ಭಾಗದಷ್ಟು ಕಾಲ, ಏಳೂವರೆ ಗಳಿಗೆ, ಒಂದು ಪ್ರಹರ, ಮೂರು ಗಂಟೆಗಳಷ್ಟು ಕಾಲ.

ತಟ (ನಾ). ಸ್ಥಳ, ಪ್ರದೇಶ

ತಡೆವಡೆ, ತಡೆಹಡೆ (ಕ್ರಿ). ಅಡ್ಡಿಗೊಳಗಾಗು; ತಡೆಯಲ್ಪಡು; ನಿಂತು ಹೋಗು

ತಣಿಯಿಸು, ತಣಿಸು, ದಣಿಯಿಸು, ದಣಿಸು (ಕ್ರಿ). ತೃಪ್ತಿ ಪಡಿಸು; ಸಂತೋಷ ಪಡಿಸು

ತರಹರಿಸು (ಕ್ರಿ). ಆತುರಪಡು, ತವಕಪಡು

ತವನಿಧಿ (ನಾ). ಎಂದೂ ನಾಶವಾಗದ, ಅಕ್ಷಯವಾದ ನಿಧಿ

ತವಿ (ಕ್ರಿ) ತಪ್ಪ (ಭವಿಕೃ) ಕುಗ್ಗು ಕಡಿಮೆಯಾಗು, ಕ್ಷಯಿಸು, ಸವೆ

ತಾಂಕು (ನಾ). ಮುಟ್ಟುವಿಕೆ, ಸ್ಪರ್ಶ

ತಾಪ (ನಾ). ಸಂಕಟ,ಕಷ್ಟ, ಕಾಟ

ತಾರು ಮಾರು (ನಾ). ಚೆಲ್ಲಾಪಿಲ್ಲಿ, ಅವ್ಯವಸ್ಥೆ, ಅಸ್ತವ್ಯಸ್ತತೆ

ತಾವು, ಠಾವು, ಥಾವು (ನಾ). ಎಡೆ, ಸ್ಥಳ, ಠಾಣ

ತಾಳೆ (ನಾ). 1. ಕೇದಗೆ; ತಾಳೆಗಿಡ. 2. ತಾಳೆಯ ಮರದಿಂದ ತಯಾರಾಗುವ ಸಾರಾಯಿ, –ಹೆಂಡ. 3. ಹೊಂದಾವಣೆ; ಮೇಳ; ಹೊಂದಿಕೆ.

ತಿಗುರು, ತಿಮಿರ್, ತಿಮಿರು (ಕ್ರಿ) ಗಂಧ ಮೊದಲಾದುವನ್ನು ಲೇಪಿಸು, ಉಜ್ಜು, ಪೂಸು

ತಿರುಪಾಟ (ನಾ). ಸುತ್ತು ತಿರುಗಿಸುವಿಕೆ (ತಿರುಪು (<ತಿರುಪು) + ಆಟ)

ತಿರುಳ್, ತಿರುಳು, ತಿಳಲು, ತಿಳಿಲು (ನಾ). ಹಣ್ಣು, ಕಾಯಿ, ಮುಂತಾದವುಗಳ ಒಳಭಾಗ, ಹುರುಳು, ಸಾರ, ಸತ್ವ, ಕೆಚ್ಚು

ತುಂಡು, ತೊಂಡು (ನಾ). ಗುಂಪು; ಸಮೂಹ

ತೂಗು, ತೂಂಕು (ಕ್ರಿ). ತಕ್ಕಡಿ ಮೊದಲಾದ ಸಾಧನಗಳಿಂದ ಭಾರವನ್ನು ಅಳೆ, ತೂಕ ಮಾಡು; 2. ಸಾಟಿಯಾಗು, ಸಮಾನನಾಗು

ತೊಟ್ಟು (ಕ್ರಿ) ಪದ್ಯ, ಹಾಡು, ಗೀತೆ

ತೊಡಿಗೆ (ನಾ). ಒಡವೆ, ಆಭರಣ, ಅಲಂಕಾರ

ತೊಡು, ತುಡು (ಕ್ರಿ) ತೊಟ್ಟ (ಭೂ ಕೃ) ತೊಟ್ಟು (ಭೂತ..) ಮೊದಲು ಮಾಡು, ಆರಂಭಿಸು

ತೊಳಗು (ಕ್ರಿ) ಹೊಳೆ, ತಳತಳಿಸು, ಪ್ರಕಾಶಿಸು

ದರಿ (ನಾ). ಆಳವಾದ ಕಮ್ಮರಿ, ಕಂದರ, ಕೊಳ್ಳ

ದಸೆ, ಜಸೆ, ದೆಶೆ, ದೆಸೆ (ನಾ). ಅದೃಷ್ಟ ಸೌಭಾಗ್ಯ, ಸುದೈವ

ದಿಙ್ನಾಗ (ನಾ). ದಿಗ್ಗಜ; ದಿಙ್ನಾಗಾಚಾರ್ಯ 5ನೇ ಶತಮಾನದ ಒಬ್ಬ ಬೌದ್ಧ ದಾರ್ಶನಿಕ.

ದಿನ (ನಾ). ಸೂರ್ಯನು ಬೆಳಗುವಷ್ಟು ಕಾಲ, ಹಗಲು, ದಿವಸ

ದುಡುಕು (ನಾ). ಆತುರ, ಅವಸರ

ದೆಸೆ (ನಾ). ಎಡೆ, ಸ್ಥಳ, ಜಾಗ

ಧನದ (ನಾ). ಕುಬೇರ

ನಂದನ (ನಾ). ಇಂದ್ರನ ತೋಟ, ಉದ್ಯಾನವನ

ನ್ಯೂನ (ನಾ). ಕೊರತೆ, ದೋಷ

ನನೆ (ಕ್ರಿ) ಹೂವು ಬಿಡು, ಮೊಗ್ಗಾಗು, ಮುಗುಳಾಗು

ನನೆ (ನಾ). ಅರಳಿದ ಹೂವು, ಮೊಗ್ಗು, ಕುಟ್ಮಲ

ನರುಗಂಪು (ನಾ). ಒಳ್ಳೆಯ ವಾಸನೆ,ಸುವಾಸನೆ, ಪರಿಮಳ

ನಲ್ಮೆ, ನಲುಮೆ (ನಾ). ಪ್ರೀತಿ, ಅನುರಾಗ, ಒಲುಮೆ

ನಿಚುಲ, ನಿಚುಳ (ನಾ). ಒಂದು ಬಗೆಯ ಕಣಗಿಲೆ ಮರ; ತೊರೆ ಕಣಗಿಲೆ

ನಿವಳ, ನಿವ್ವಳ (ಗು). 1. ಒಳ್ಳೆಯ; ಉತ್ತಮವಾದ; ಹದವಾದ. 2. ಚೆಲುವಾದುದು; ಅಂದವಾದುದು. 3. (ಖರ್ಚನ್ನು ಕಳೆದ ಬಳಿಕ) ಉಳಿಯುವ, ಉಳಿತಾಯವಾಗುವ

ನಿರ್ವಿಂಧ್ಯ (ನಾ). ವಿಂಧ್ಯಪರ್ವತದಲ್ಲಿ ಹುಟ್ಟುವ ನದಿ

ನಿರಿಗೆ (ನಾ). (ಸೀರೆ, ದೋತ್ರ ಮುಂತಾದವುಗಳ) ಮಡಿಕೆ

ನೀರು (ನಾ). ವಜ್ರ ಮುತ್ತು ರತ್ನ ಮುಂತಾದವುಗಳಲ್ಲಿರುವ ಕಾಂತಿ, ಹೊಳಪು

ನೀವಿ (ನಾ). ಸೀರೆಯನ್ನು ಉಡುವಾಗ ನಿರಿಗೆಗಳನ್ನು ಸಿಕ್ಕಿಸಲು ಹಾಕುವ ಗಂಟು, ಬಾಳೆಕಾಯಿ, ಕಣಯ

ನೀವಿಬಂಧ (ನಾ). ಕಣಯದ ಗಂಟು

ನೆಲೆಗಟ್ಟು, ನೆಲೆಕಟ್ಟು (ನಾ). ಸಮಮಾಡಿದ ನೆಲ, ಕುಟ್ಟಿಮ

ಪಕಳೆ (ನಾ). ಹೂವಿನ ದಳ, ಎಸಕು, ರೇಕು

ಪದ್ಮಿನಿ (ನಾ). ನಾಲ್ಕು ಬಗೆಯ ಸ್ತ್ರೀ ಜಾತಿಗಳಲ್ಲಿ ಮೊದಲನೆಯದು ಮತ್ತು ಆ ಜಾತಿಗೆ ಸೇರಿದ ಸ್ತ್ರೀ

ಪನೆ (ನಾ). ಹೊಸದಾಗಿ ಕಟ್ಟಿದ ಹಲ್ಲು, ಅದೇ ತಾನೆ ಮೊಳೆಯುತ್ತಿರುವ ಹಲ್ಲು, ಮೊಳೆಹಲ್ಲು

ಪಾಮರ (ನಾ). ಏನೂ ತಿಳಿಯದವ; ದಡ್ಡ; ಮೂಢ

ಪಾಸು, ಹಾಸು (ನಾ). ಹಾಸುಗೆ, ಶಯ್ಯೆ

ಪೂತ (ನಾ). ಪವಿತ್ರವಾದುದು, ಪಾವನವಾದುದು

ಪೊಕ್ಕರಣೆ, ಹೊಕ್ಕರಣೆ (ನಾ). (ದೇವಸ್ಥಾನದ ಬಳಿ ಇರುವ ಪವಿತ್ರವಾದ) ಕೊಳ, ಕಲ್ಯಾಣಿ

ಪೊಗರು, ಹೊಗರು (ನಾ). ಕಾಂತಿ, ಹೊಳಪು, ಮೆರುಗು, ಪ್ರಕಾಶ

ಬಂಜುಗೆಡು (ಕ್ರಿ.). ಬಂಜರಿಲ್ಲದಾಗು; ಫಲವತ್ತಾಗು (ಬಂಜು + ಕೆಡು)

ಬಕ (ನಾ). ಕೊಕ್ಕರೆ ಜಾತಿಗೆ ಸೇರಿದ ಒಂದು ಜಲಚರ ಪಕ್ಷಿ

ಬಗೆ (ನಾ). ಆಲೋಚನೆ, ಯೋಚನೆ

ಬಚ್ಚ (ಗು) ಕೆಟ್ಟುದು

ಬಯ್ತಲೆ, ಬೈತಲೆ (ನಾ). ತಲೆಯ ಮೇಲ್ಭಾಗದಲ್ಲಿ ಕೂದಲನ್ನು ಎರಡು ಕಡೆಗೂ ಬಾಚಿದಾಗ ಮಧ್ಯೆ ಗೆರೆಯಂತೆ ಕಾಣುವ ಸ್ಥಳ, ಜಾಗ

ಬಲಭದ್ರ (ನಾ). ಬಲರಾಮ, ಶ್ರೀಕೃಷ್ಣನ ಅಣ್ಣ

ಬಾಗು (ಕ್ರಿ) (ಅಲಂ) ವಿನಯದಿಂದ ವರ್ತಿಸು, ತಗ್ಗಿನಡೆ, ಸಗ್ಗು

ಬಾಳ್, ಬಾಳು (ನಾ). ಬದುಕು, ಇರವು, ಜೀವನ

ಬಿದಿರ್, ಬಿದಿರು (ಕ್ರಿ) ಕೆದರು, ಚೆದರು, ಹರಡು

ಬೆಚ್ಚನುಸಿರು (ನಾ). ಬಿಸಿಯಾದ ಉಸಿರು

ಬೇಟ (ನಾ). ಹೆಣ್ಣು ಗಂಡುಗಳಲ್ಲಿ ಪರಸ್ಪರ ಉಂಟಾಗುವ ಮೋಹ, ಪ್ರಣಯ, ಪ್ರೀತಿ

ಭವ (ನಾ). ಮರುಹುಟ್ಟು, ಪುನರ್ಜನ್ಮ

ಭವಿ (ನಾ). ಸಂಸಾರ ಬಂಧನಕ್ಕೊಳಗಾದವನು

ಮಂದಾರ (ನಾ). ಒಂದು ಬಗೆಯ ಮರ ಮತ್ತು ಸುವಾಸನೆಯುಳ್ಳ ಅದರ ಹೂವು (ಸುರಾಸುರರು ಕ್ಷೀರ ಸಮುದ್ರವನ್ನು ಕಡೆದಾಗ ಹುಟ್ಟಿದ ಐದು ಕಲ್ಪವೃಕ್ಷಗಳಲ್ಲಿ ಒಂದೆಂದು ನಂಬಲಾಗಿದೆ.)

ಮದರಂಗಿ (ನಾ). ಒಂದು ಬಗೆಯ ಗಿಡ ಮತ್ತು ಅದರ ಎಲೆ, ಗೋರಂಟಿ

ಮಧು (ಗು) ಸುಖಕರವಾದ, ಆಹ್ಲಾದಕರವಾದ

ಮಲಕು (ನಾ). ಜೋಡಣೆ, ಹೆಣಿಗೆ

ಮಹಮನೆ, ಮಹಾಮನೆ, ಮಾಮನೆ (ನಾ). ದೊಡ್ಡ ಮನೆ, ಭವ್ಯವಾದ ಸೌಧ, ಅರಮನೆ

ಮಾಡ (ನಾ.). (1) ಉಪ್ಪರಿಗೆ ಮನೆ, ಭವನ, ಹರ್ಮ್ಯ (2) ಮನೆಯ ಇಳಿಜಾರಾದ ಛಾವಣಿಯ ತುದಿ, ಸೂರಿನ ಕೊನೆ

ಮಾಡಾ (ನಾ). ಮೋಡ

ಮಾನವಂತ (ನಾ). ಗೌರವಯುಕ್ತ ವ್ಯಕ್ತಿ; ಮರ್ಯಾದಸ್ಥ

ಮಾನಸ (ನಾ). ಅಂತರಂಗ; ಮನಸ್ಸು ಚಿತ್ತ; (ಗು). ಅಂತರಂಗದ, ಮನಸ್ಸಿಗೆ ಸಂಬಂಧಿಸಿದ

ಮಾಳ (ನಾ). ಎತ್ತರವಾದ ಬಯಲು ಪ್ರದೇಶ, ಮೈದಾನ

ಮುಗಿಬೀಳು (ಕ್ರಿ) (ಉಕ) ಕವಿ, ಮುತ್ತು, ಮುಸುಕು

ಮುಗುಳ್, ಮುಗುಳು (ನಾ). ಅರೆಬಿರಿದ ಹೂವು; ಕುಟ್ಮಲ

ಮುಟ್ಟು (ಕ್ರಿ) ದೇಹ ಸಂಬಂಧವನ್ನು ಹೊಂದು, ಕೂಡು

ಮುಪ್ಪುರಿ (ನಾ). ಮೂರು ಹುರಿಗಳನ್ನು ಸೇರಿಸಿ ಹೊಸೆದ ದಪ್ಪ ಹುರಿ, ಹೊರಜೆ

ಮುರುಕ, ಮುರುಕು (ನಾ). ಬಿಂಕ, ಬಿನ್ನಾಣ, ಬೆಡಗು

ಮುಳುಗು (ನಾ). ಮರೆ, ಅಸ್ತಮಾನ

ಮೆಟ್ಟು (ನಾ). ತುಳಿಯುವಿಕೆ, ತುಳಿತ

ಮೆಲ್ಲಡಿ (ನಾ). ಮೃದುವಾದ ಪಾದ, ಕೋಮಲವಾದ ಅಡಿ

ರಕ್ತ (ಗು) ಅಕ್ಕರೆಯ, ಪ್ರೀತಿಯ

ರೇವೆ (ನಾ). ಒಂದು ನದಿಯ ಹೆಸರು; ನರ್ಮದೆ

ಲೋಧ್ರ ಪುಷ್ಪ (ನಾ). ಒಂದು ಬಗೆಯ ಮರ, ಇಪ್ಪೆ, ಮಧೂಕ

ಲೋಲ, ಲೋಳ (ಗು.) ಅತ್ತಿತ್ತ ಅಲುಗಾಡುವ ಚಲಿಸುವ, ಚಂಚಲವಾದ

ವನ (ನಾ). 1. ನೀರು, ಉದಕ, 2. ಮೋಡ

ವೈದರ್ಭಿ (ನಾ). ವಿದರ್ಭ ದೇಶದ ರಾಜಕುಮಾರಿ, ಭೀಮರಾಜನ ಮಗಳು, ದಮಯಂತಿ

ಶರಭ (ನಾ). ಪುರಾಣ ಕಾವ್ಯಗಳಲ್ಲಿ ಉಲ್ಲೇಖಿತವಾಗಿರುವ, ಸಿಂಹಕ್ಕಿಂತಲೂ ಬಲಿಷ್ಠವೆಂದು ಭಾವಿಸಲಾಗಿರುವ ಎಂಟು ಕಾಲುಗಳ ಒಂದು ಬಗೆಯ ಪ್ರಾಣಿ

ಸಂದು (ನಾ). ಮನಸ್ಸಿನ ಖಿನ್ನತೆ, –ನಿರುತ್ಸಾಹ; ಸೇರುವೆ, ಯೋಗ, ಕೂಟ

ಸ್ವಾಂತ (ನಾ). ಮನಸ್ಸು, ಅಂತರಂಗ

ಸಲಿ(ಳಿ)ಲ (ನಾ). ನೀರು, ಜಲ

ಸಾಂಗ (ಗು). ಪೂರ್ಣವಾದ, ಸಮಗ್ರವಾದ

ಸಾರಂಗ (ನಾ). 1. ಹುಲ್ಲೆ, ಜಿಂಕೆ 2. ಮೈಮೇಲೆ ಚಿಕ್ಕಿಗಳಿರುವ ಜಿಂಕೆ; ಚುಕ್ಕೆದುಪ್ಪಿ

ಸಾರಿಕೆ (ನಾ). ಹೆಣ್ಣುಗಿಳಿ, ಶಾರಿಕೆ

ಸಿದ್ಧ (ನಾ). ಅಣಿಮಾದಿ ಅಷ್ಟಸಿದ್ಧಿಗಳನ್ನು ಸಾಧಿಸಿದವನು. ಅಲೌಕಿಕ ಸಾಮರ್ಥ್ಯವುಳ್ಳವನು.

ಸಿರಿಸ, ಸಿರಿಸಲ (ನಾ). ಒಂದು ಬಗೆಯ ಮರ ಮತ್ತು ಅದರ ಹೂವು, ಬಾಗೆ

ಸುಸಿಲು (ನಾ). ಕೂಟ, ಸಂಭೋಗ

ಸೆಳಕು (ನಾ). ಎಳೆತ, ಆಕರ್ಷಣೆ

ಸೇಲೆ, ಶೇಲೆ, ಸೀಲೆ (ನಾ). ಹೆಂಗಸರು ಉಡುವ ವಸ್ತ್ರ, ಸೀರೆ

ಸೊಗವಡು (ಕ್ರಿ) ಹಿಗ್ಗು, ಆನಂದಿಸು, ಸುಖಿಸು

ಸೊಪ್ಪೆ (ನಾ). ನಾರು, ಜುಂಗು

ಸೊಲ್ಲು (ನಾ). ನಾದ ಧ್ವನಿ

ಸ್ನಿಗ್ಧತೆ (ನಾ). ಮಾರ್ದವ; ಮಧುರತೆ

ಹರಿ (ನಾ). ವಾಯು

ಹಲ, ಹಳ (ನಾ). 1. ನೇಗಿಲು, ರಾಟೆ, 2. ವಿರೂಪತೆ, ಕುರೂಪತೆ

ಹಿಂಗು (ಕ್ರಿ) ಬಿಟ್ಟುಹೋಗು; ಹೊರಟು ಹೋಗು

ಹಿಗ್ಗಣ್ಣು (ನಾ). (ಸಂತೋಷದಿಂದ) ಹಿಗ್ಗಿದ ಕಣ್ಣು, ಅಗಲವಾಗಿರುವ ಕಣ್ಣು (ಹಿಗ್ಗು (<ಪಿಳ್ಗು) + ಕಣ್ಣು (<ಕಣ್))

ಹಿಣಿಲು (ನಾ). 1. ಒಂದಕ್ಕೊಂದು ಹೆಣೆದುಕೊಂಡಿರುವುದು, ತೊಡಕಿಕೊಂಡಿರುವುದು 2. ಹೆರಳು, ಹೆಳಲು, ಜಡೆ

ಹಿಳಿ, ಪಿಳಿ (ಕ್ರಿ) ಹಿಸುಕಿ ರಸವನ್ನು ತೆಗೆ, ಹಿಂಡು

ಹುರುಳು (ನಾ). ಸತ್ವ, ಸಾರ, ತಿರುಳು

ಹೆಳಲು, ಹೆಣಲು, ಹೆರಳು, ಪೆಣಲ್ (ನಾ). ಕೂದಲನ್ನು ಒಟ್ಟಾಗಿ ಸೇರಿಸಿ ಹೆಣೆದುದು; ಜಡೆ

ಹೊರಪು (ನಾ). ಮಳೆಯ ಮೋಡಗಳಿಲ್ಲದೆ ಆಕಾಶವು ನಿರ್ಮಲವಾಗಿ ಕಾಂತಿಯುಕ್ತವಾಗಿರುವುದು

# ಪದ್ಯಾನುಕ್ರಮಣಿಕೆ

# ಗ್ರಂಥಋಣ


1. ಈಶಾವಾಸ್ಯ ಉಪನಿಷತ್, ಅನುವಾದಕರು: ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರು, ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೆನರಸೀಪುರ, 1989.
2. ಕುವೆಂಪು, ಗುರುವಿನೊಡನೆ ದೇವರಡಿಗೆ, ಪ್ರಕಾಶಕರು ಶ್ರೀರಾಮಕೃಷ್ಣ ಆಶ್ರಮ, ಮೈಸೂರು, 2010.
3. ಜಿ. ಶ್ರೀನಿವಾಸ ರಾಜು, ಸಂಪಾದಕರು, ಬೇಂದ್ರೆ ಸಾಹಿತ್ಯ – ಒಂದು ಅಧ್ಯಯನ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು 2000.
4. ಚುಳುಕಿ ಗೋವಿಂದ ರಾಯರು, ಸಂಪಾದಕರು, ಕವಿವರ ಬೇಂದ್ರೆ, ಮನೋಹರ ಗ್ರಂಥ ಭಂಡಾರ, ಧಾರವಾಡ 1946.
5. ಛಾಂದೋಗ್ಯ ಉಪನಿಷತ್, ಅನುವಾದಕರು: ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರು, ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೆನರಸೀಪುರ, 1989.
6. ತೀನಂಶ್ರೀ, ಭಾರತೀಯ ಕಾವ್ಯಮೀಮಾಂಸೆ, ಪ್ರಕಾಶಕರು ಪ್ರಸಾರಾಂಗ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 2016.
7. ತೈತ್ತಿರೀಯ ಉಪನಿಷತ್, ಅನುವಾದಕರು: ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರು, ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೆನರಸೀಪುರ, 1989
8. ದ.ರಾ. ಬೇಂದ್ರೆ, ಅರಳು–ಮರಳು (ಪಂಚಕಾವ್ಯ ಗುಚ್ಛ), ಸಮಾಜ ಪುಸ್ತಕಾಲಯ, ಧಾರವಾಡ 1957.
9. ದ.ರಾ. ಬೇಂದ್ರೆ, ಕನ್ನಡ ಮೇಘದೂತ, ಪ್ರಕಾಶಕರು,, ಬಳವಂತ ಬಾಗಲವಾಡಿ, ಧಾರವಾಡ, ಡಿಸೆಂಬರ್ 1943.
10. ದ.ರಾ. ಬೇಂದ್ರೆ, ಮಾತೆಲ್ಲ ಜ್ಯೋತಿ, ಮಣಿಪಾಲ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್ (ಲಿ), ಮಣಿಪಾಲ 1992.
11. ದ.ರಾ. ಬೇಂದ್ರೆ, ಸಖೀಗೀತ, ಸಮಾಜ ಪುಸ್ತಕಾಲಯ, ಧಾರವಾಡ, 1958
12. ದ.ರಾ. ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಸಮಾಜ ಪುಸ್ತಕಾಲಯ, ಧಾರವಾಡ 1974.
13. ದ.ರಾ. ಬೇಂದ್ರೆ, ಯಕ್ಷ ಯಕ್ಷಿ, ಪ್ರತಿಭಾ ಗ್ರಂಥಮಾಲೆ, ಧಾರವಾಡ, 1962.
14. ಪತಂಜಲಿಯ ಯೋಗಸೂತ್ರಗಳು, ಸ್ವಾಮಿ ಆದಿದೇವಾನಂದ, ಶ್ರೀರಾಮಕೃಷ್ಣಾಶ್ರಮ, ಮೈಸೂರು, 1995.

15. ಬುದ್ದಣ್ಣ ಹಿಂಗಮಿರೆ, ಸಂಪಾದಕರು, ಇಳಿದು ಬಾ ತಾಯಿ (ಶ್ರೀ ಬೇಂದ್ರೆ ಅಭಿನಂದನ ಗ್ರಂಥ), ಸಮಾಜ ಪುಸ್ತಕಾಲಯ,ಧಾರವಾಡ 1977.

16. ಬೆನಗಲ್ ರಾಮರಾವ್, ಪಾನ್ಯಂ ಸುಂದರಶಾಸ್ತ್ರಿ, ಪುರಾಣನಾಮ ಚೂಡಾಮಣಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ನಾಲ್ಕನೆ ಆವೃತ್ತಿ 2001.

17. ವಾಮನ ಬೇಂದ್ರೆ, ಶ್ರೀ ಬೇಂದ್ರೆಯವರ ಜೀವನ ಪರಿಚಯ, ಸಮಾಜ ಪುಸ್ತಕಾಲಯ,ಧಾರವಾಡ 1982.

18. ವಾಸುದೇವಮೂರ್ತಿ ಟಿ.ಎನ್. ಕಿರಂ ನೆನಪು, ವಂಶಿ ಪಬ್ಲಿಕೇಷನ್ಸ್, ಬೆಂಗಳೂರು 2020.

19. ವಾಸುದೇವಮೂರ್ತಿ ಟಿ.ಎನ್. ರಾಮಾಯಣ ಒಂದು ಹೊಸ ಓದು, ಗೋಮಿನಿ ಪ್ರಕಾಶನ, ತುಮಕೂರು, 2020.

20. ಶ್ರೀಮದ್ವಾಲ್ಮೀಕಿ ರಾಮಾಯಣ, ಭಾರತ ದರ್ಶನ ಪ್ರಕಾಶನ, ಬೆಂಗಳೂರು, 1989.

21. ಶ್ರೀಮನ್ಮಹಾಭಾರತ, ಭಾರತ ದರ್ಶನ ಪ್ರಕಾಶನ, ಬೆಂಗಳೂರು, 1981.

22. ಶಾಂಕರ ಭಾಷ್ಯ ಸಮೇತ ಶ್ರೀಮದ್ಭಗವದ್ಗೀತೆ, ಅನುವಾದಕರು: ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರು, ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೆನರಸೀಪುರ, 1989.

23. Abhijnana Shakuntala of Kalidasa, Translation & Introduction with notes by C Sankara Rama Sastri, The Sri Bala Manorama Press, Madras 1947.

24. Bannerjee, Akshay Kumar, Philosophy of Goraksha, Published by Mahant Dig Vijai Nath Trust, Gorakhpur, 1945.

25. Kale M.R., Kalidasa's Kumara Sambhava, Vishnu Panduranga Tendulkar, The Standard Publishing Company, Bombay, 1917.

26. Kale M.R., The Meghaduta of Kalidasa, D.V. & B.D. Mulgaonkar, Gopal Narayen & Co, Bombay 1934.

27. The Complete works of Swami Vivekananda, Advaita Ashrama, Calcutta, 1994.

28. Upadhya B S., India in Kalidasa, S. Chand & Co., Second edi tion 1968.



# ಪುಸ್ತಕ ಪಟ್ಟಿ

| ಕ್ರ.ಸ | ಶೀರ್ಷಿಕೆ | ಲೇಖಕರು | ಬೆಲೆ |
|---|---|---|---|
| 1 | ಜೀವ ಜೀವದ ನಂಟು (*) | ಬಿ ಎಸ್ ಜಯಪ್ರಕಾಶ ನಾರಾಯಣ | 95.00 |
| 2 | ಓಶೋ ಬುದ್ಧ ಮತ್ತು ಪರಂಪರೆ | ಅನು: ಟಿ. ಎನ್. ವಾಸುದೇವಮೂರ್ತಿ | 400.00 |
| 3 | ಸೊಗಸುಗಾರನ ಏಳುಬೀಳು ವಿಜಯ್ ಮಲ್ಯ ವೃತ್ತಾಂತ | ಅನು:ಬಿ ಎಸ್ ಜಯಪ್ರಕಾಶ ನಾರಾಯಣ | 195.00 |
| 4 | ತಿರು ತಿರುಗಿಯು ಹೊಸತಾಗಿರಿ (*) | ಡಾ.ಜಿ. ಕೃಷ್ಣಪ್ಪ | 100.00 |
| 5 | ಬೇಂದ್ರೆಯವರ ಸಾಹಿತ್ಯದಲ್ಲಿ ಶರಣ ಚಿಂತನೆ(*) | ಡಾ.ಜಿ. ಕೃಷ್ಣಪ್ಪ | 30.00 |
| 6 | ಓಶೋ ಕಾವ್ಯಧರ್ಮ ಮತ್ತು ಧರ್ಮ (*) | ಅನು: ಟಿ. ಎನ್. ವಾಸುದೇವಮೂರ್ತಿ | 150.00 |
| 7 | ನಡಿಗೆಯೊಂದಿಗೆ ಧ್ಯಾನ (*) | ಅನು: ಬೆ. ಕಾ ಮೂರ್ತೀಶ್ವರಯ್ಯ | 65.00 |
| 8 | ವಚನ ಹರಿಶ್ಚಂದ್ರ ಚಾರಿತ್ರ | ಡಾ.ಜಿ. ಕೃಷ್ಣಪ್ಪ | 120.00 |
| 9 | ದಿ ಆರ್ಟಿಸ್ಟ್ (*) | ಅನು: ಸುಭಾಷ್ ರಾಜಮಾನೆ | 60.00 |
| 10 | ಕೆರೆಯಂಗಳದ ನವಾಬ | ಶಿ. ಜು. ಪಾಶ | 100.00 |
| 11 | ಓಶೋ ಧ್ಯಾನಸಿದ್ಧ | ಅನು: ಟಿ. ಎನ್. ವಾಸುದೇವಮೂರ್ತಿ | 110.00 |
| 12 | ರಮಣ ಹೃದಯ | ಟಿ. ಎನ್. ವಾಸುದೇವಮೂರ್ತಿ | 110.00 |
| 13 | ಶ್ರೀತುಲಸೀ ಅಮೃತಪಾನ (*) | ಸ್ವಾಮಿ ಶಿವಾತ್ಮಾನಂದ | 150.00 |
| 14 | ಹರಹರ ಯೋಗಿ (*) | ಜಿ. ಎಸ್. ಯುಧಿಷ್ಠಿರ | 195.00 |
| 15 | ಹಾರುವ ಹಕ್ಕಿ (*) | ಓಶೋ / ಭುವನೇಶ್ ಎಸ್ | 225.00 |
| 16 | ಶ್ರೀಶಾರಾದರಾಮ (*) | ಸ್ವಾಮಿ ಶಿವಾತ್ಮಾನಂದ | 125.00 |
| 17 | ನಿರ್ದಿಗಂತವಾಗಿ ಏರಿ (*) | ಸುಭಾಷ್ ರಾಜಮಾನೆ | 245.00 |
| 18 | ಜ್ಹೆನ್ ಹೈಕುಗಳು (*) | ಓಶೋ/ಟಿ. ಎನ್. ವಾಸುದೇವಮೂರ್ತಿ | 150.00 |
| 19 | ಗುಲಾಮಗಿರಿಯ ಆ ಹನ್ನೆರಡು ವರ್ಷಗಳು | ಡಿ. ಎನ್. ಶ್ರೀನಾಥ್ | 200.00 |
| 20 | ಬಾಂಧವ್ಯ ಬೆಸೆಯುವ ಹಬ್ಬಗಳು/ಮಹಾಮಹಿಮರ ಜಯಂತಿಗಳು | ಮಂಡಗದ್ದೆ ಪ್ರಕಾಶ ಬಾಬು ಕೆ. ಆರ್. | 190.00 |
| 21 | ಜ್ಯೋತಿಷ್ಯ ಪ್ರಕಾಶ (*) | ಮಂಡಗದ್ದೆ ಪ್ರಕಾಶ ಬಾಬು ಕೆ. ಆರ್. | 160.00 |
| 22 | ಕನ್‌ಫ್ಯುಷಿಯಸ್ ಸೂಕ್ತಿ-ಸಂಗ್ರಹ | ಡಿ. ಎನ್. ಶ್ರೀನಾಥ್ | 120.00 |
| 23 | ಬೇಂದ್ರೆಕಾವ್ಯ; ಪದನಿರುಕ್ತ (ಉತ್ತಮ ಪ್ರತಿ) (*) | ಡಾ.ಜಿ. ಕೃಷ್ಣಪ್ಪ | 480.00 |
| 24 | ರೂಪಾತರಂಗ | ರೂಪಾಗುರುರಾಜ್ | 100.00 |
| 25 | ಈ ಸಾಲು ಸಾಲುವುದಿಲ್ಲ | ಎಂ. ಶ್ರೀಕಾಂತ ತಾಮ್ರಪರ್ಣಿ | 100.00 |
| 26 | ನಿಮ್ಮ ಶ್ರೀಮಂತಿಕೆಗೆ ನೀವೇ ಶಿಲ್ಪಿ | ಅನು: ಯಗಟಿ ರಘು ನಾಡಿಗ್ | 100.00 |
| 27 | ಹಸಿರು ಹಚ್ಚಿ ಚುಚ್ಚಿ | ಡಾ.ಜಿ. ಕೃಷ್ಣಪ್ಪ | 150.00 |
| 28 | ಪ್ರಾಣ ಉಳಿಸಿದ ಪುಣ್ಯಕೋಟಿ (ಕ್ಯಾನ್ಸರನ್ನು ಮಣಿಸಿದವನ ಮನ ಕಲಕುವ ಕತೆ) | ಅನು: ಬಿ ಎಸ್ ಜಯಪ್ರಕಾಶ ನಾರಾಯಣ | 250.00 |
| 29 | ನಾನೆಂಬ ಭಾರತೀಯ (ಅತ್ಮ ಕಥನ) | ಮೂಲ: ಕೆ ಕೆ ಮಹಮ್ಮದ್ ಕನ್ನಡಕ್ಕೆ: ಬಿ. ನರಸಿಂಗ ರಾವ್ | 160.00 |
| 30. | ಗಗ್ಗರಿ ನುಡಿಸುವ ಬೆರಳು | ಪಿ. ಆರಡಿಮಲ್ಲಯ್ಯ ಕಟ್ಟೇರ | 100.00 |
| 31. | ಫ್ರೆಡರಿಕ್ ನೀಷೆ (ಬುದ್ಧಿಜೀವಿಯೊಬ್ಬನ ಭಾವಪೂರ್ಣ ಕಥಾನಕ) | ಟಿ.ಎನ್. ವಾಸುದೇವ ಮೂರ್ತಿ | 240.00 |

| | | | |
|---|---|---|---|
| 32. | ಕಠಿಣ ಪ್ರಶ್ನೆಗಳು ಸ್ಮಾರ್ಟ್ ಉತ್ತರಗಳು | ರಂಗರಾಜ್ ಚಕ್ರವರ್ತಿ | 100.00 |
| 33. | ಕೇದಾರನ ಕಾಶಿ (ಭಾರತೀಯ ಯೋಗಾಧ್ಯಾತ್ಮದ ಚಿಂತನ-ಮಂಥನ) | ಸ್ವಾಮಿ ಶಿವಾತ್ಮಾನಂದ | 320.00 |
| 34. | ಪಂಡಿತ (ಸತ್ತ್ವಗುಣಗಳ ಸಂಚಯ) | ಶಿವಾನಂದ ಪಂಡಿತ | 60.00 |
| 35. | ಆಸ್ಥೆ (ಕಾದಂಬರಿ) | ವಿನೋದ ಕೆ.ಎಲ್. | 120.00 |
| 36. | ಗಾಳಿಗಂಧ (ಜೀವ ಸರಪಳಿಯ ಸಾಹಿತ್ಯ ಕಥನ) | ಸತ್ಯಮಂಗಲ ಮಹಾದೇವ | 100.00 |
| 37. | ನಿಮಗೆ ನೀವೇ ದಾರಿದೀಪ (ವ್ಯಾಲೇಸ್ ಡಿ. ವ್ಯಾಟಲ್ಸ್) | ವಿಶ್ವಾಸ್ ಭಾರಧ್ವಾಜ್ | 65.00 |
| 38. | ಸನ್ ತ್ಸು ದಿ ಆರ್ಟ್ ಆಫ್ ವಾರ್ | ಭುವನೇಶ್ ಎಸ್.<br>ಅಂಬಿಕಾ ಸೀತೂರು | 100.00 |
| 39. | ಜೇಮ್ಸ್ ಅಲೆನ್ ವ್ಯಕ್ತಿಯ ಅರಿವಿನಂತೆ ವ್ಯಕ್ತಿತ್ವ | ಅನು : ಬೆ.ಕಾ.ಮೂರ್ತಿಶ್ವರಯ್ಯ | 65.00 |
| 40. | ಓಶೋ ಕ್ರಿಸ್ತ ಮತ್ತು ಕ್ರಿಶ್ಚಿಯಾನಿಟಿ | ಅನು : ಟಿ.ಎನ್. ವಾಸುದೇವ ಮೂರ್ತಿ | 400.00 |
| 41. | ಕಿರಂ ನೆನಪು | ಟಿ.ಎನ್. ವಾಸುದೇವ ಮೂರ್ತಿ | 160.00 |
| 42. | ಮಹಾಸಮಷ್ಟಿಭಾವ (ಆಧ್ಯಾತ್ಮಸಾಧನೆಯ ಭಾವವಿಸ್ತಾರ) | ಸ್ವಾಮಿ ಶಿವಾತ್ಮಾನಂದ ಪುರಿ | 160.00 |
| 43. | ಧನ್ಯವೀಣಾ | ಜಿ.ಎಸ್. ಯುಧಿಷ್ಠರ | 90.00 |
| 44. | ಶ್ರೀರುದ್ರ ಸಾಧನೆ | ಸ್ವಾಮಿ ಶಿವಾತ್ಮಾನಂದ ಪುರಿ | 140.00 |
| 45. | ಅಜ್ಞಾತ | ವಿವೇಕಾನಂದ ಕಾಮತ್ | 170.00 |
| 46. | ನಮ್ಮದಿದು ಇತಿಹಾಸ | ಎಚ್.ಎಸ್. ಗೋಪಾಲ ರಾವ್ | 160.00 |
| 47. | ಮಹಾತ್ಮಾ ವರ್ಸಸ್ ಗಾಂಧಿ | ಡಿ.ಎನ್. ಶ್ರೀನಾಥ್ | 300.00 |
| 48. | ದಲಿತ ಕೋಟ್ಯಧಿಪತಿಗಳು | ಮಿಲಿಂದ್ ಖಂಡೇಕರ್/ಯು. ಶ್ರೀಧರ್ | 250.00 |
| 49. | ಓಶೋ ಹೇಳಿದ ಬುದ್ಧನ ಕಥೆಗಳು | ಟಿ.ಎನ್. ವಾಸುದೇವ ಮೂರ್ತಿ | 220.00 |
| 50. | ಪ್ರಶಾಂತತೆಯ ವಚನಸಿರಿ (Stillness Speaks) | ಎಕ್‌ಹಾರ್ಟ ಟೊಲ್ಲೆ | 150.00 |
| 51. | ಮುನಿಸಂಚಾರ | ಅಶೋಕ | 280.00 |
| 52. | ಸಿಹಿನೀರಿನ ಅಕ್ವೇರಿಯಂ ಮತ್ತು ನಿರ್ವಹಣೆ | ಮೋಹನ್ ಕುಮಾರ್ | 100.00 |
| 53. | ಶ್ರೀರಾಮಾಯಣ ದರ್ಶನಂ ಪಾತ್ರಗಳ ಕಥಾವಳಿ | ಡಾ. ಜಿ. ಕೃಷ್ಣಪ್ಪ | 120.00 |
| 54. | ಗಂಡು ಜೀವ, ಹೆಣ್ಣು ಭಾವ | ಮಾನವಿ ಬಂದೋಪಾಧ್ಯಾಯ<br>ಬಿ.ಎಸ್. ಜಯಪ್ರಕಾಶ ನಾರಾಯಣ | 250.00 |
| 55. | ಬ್ಯಾಬಿಲೋನ್‌ನಲೊಬ್ಬ ಕುಬೇರ<br>(The Richest man of the Babylon) | ಜಾರ್ಜ್ ಸ್ಯಾಮ್ಯುಯೆಲ್ ಕ್ಲಾಸನ್/<br>ಯಗಟಿ ರಘು ನಾಡಿಗ್ | 170.00 |
| 56. | ತಂತಿಯ ತುಂಡು | ಟಿ. ಎಸ್. ರಘುನಾಥ್ | 130.00 |
| 57. | ಅಗೋಚರ ಜಾಲ | ಜ್ಯೋತ್ಸ್ನಾ ಕಾಸು/ವಿಶ್ವಾಸ್ ಭಾರಧ್ವಾಜ್ | 150.00 |
| 58. | ದಿನದ 24 ಗಂಟೆಗಳಲ್ಲಿ ಜೀವಿಸುವುದು ಹೇಗೆ? | ಅರ್ನಾಲ್ಡ್ ಬೆನ್ನೆಟ್/ಕೆ. ಪ್ರಭಾಕರನ್ | 80.00 |

* ಪ್ರತಿಗಳು ಮುಗಿದಿವೆ.

ಮರ್ತ್ಯದಲ್ಲಿ ಅಮರ್ತ್ಯವನ್ನು ಸವಿದ ಪ್ರತಿಭೆ ಕಾಳಿದಾಸನದು. ಭಾರತೀಯ ಸಂಸ್ಕೃತಿ ಇರುವವರೆಗೆ, ಅಷ್ಟೇ ಏಕೆ, ಜಗತ್ತಿನ ಸಾಹಿತ್ಯ ಸಂಸ್ಕೃತಿಗಳಿರುವವರೆಗೆ ಕಾಳಿದಾಸನು ಚಿರನೂತನವಾಗಿ ಬಾಳುವುದರಲ್ಲಿ ಸಂಶಯವಿಲ್ಲ.

-ಕುವೆಂಪು

ಅಂಬಿಕಾತನಯದತ್ತರು ಕನ್ನಡದಲ್ಲಿ ಒಂದು ವಿನೂತನ ಛಂದಸ್ಸನ್ನು ನಿರ್ಮಿಸಿ ಮೇಘದೂತವನ್ನು ಮೂಲಕ್ಕಿಂತ ಒಂದು ತೂಕ ಹೆಚ್ಚು ಎನಿಸುವಂತೆ ಭಾವಾನುವಾದ ಮಾಡಿ ಅನುವಾದ ಕ್ಷೇತ್ರದಲ್ಲಿ ಒಂದು ವಿಕ್ರಮವನ್ನೇ ಸಾಧಿಸಿದ್ದಾರೆ

- ಕೆ. ಕೃಷ್ಣಮೂರ್ತಿ

ಕಾಮಿ ಯಕ್ಷನು ವಿರಹದಿಂದ ಕವಿಯಾಗುವನು. ಅವನ ಕಣ್ಣು ಚೆಲುವಿಗೆ ಕಣ್ಣಾಗುವುದು. ಅವನ ಹೃದಯ ರಸಕ್ಕೆ ನೆಲೆಯಾಗುವುದು. ಕಾಳಿದಾಸ ಈ ಮನಃಪರಿಪಾಕವನ್ನು ಬಹು ರಮ್ಯವಾಗಿ, ಧ್ವನಿಪೂರ್ಣವಾಗಿ ಚಿತ್ರಿಸಿದ್ದಾನೆ. ಧರ್ಮಾವಿರುದ್ಧವಾದ ಕಾಮದಲ್ಲಿ ಹುಟ್ಟಿದ ಕಾವ್ಯ ಭಕ್ತಿಯ ಸಂಕೇತವಾಗುವುದು

- ದ.ರಾ. ಬೇಂದ್ರೆ

ಕವಿಯ ದಿವ್ಯ ಭವ್ಯ ಮಂಗಳ ಹೃದಯದಲ್ಲಿ ಜಗದ ಒಳಿತಿನ ಹಿರಿಬೆಳಕಿನ ಮಿಸುಕಾಟವೇ ಹಿಗ್ಗಿ ಕತ್ತಲೆಯನ್ನು ಇಲ್ಲವಾಗಿಸಿದೆ. ಅದು ಈ ವಿಶ್ವದ ಬದುಕಿನ ಬವಣೆಯ ನೋವು, ನರಳಾಟವೆಂಬ ಸಾವನ್ನು ಸುಲಿಯುತ್ತ ಬಾಳಿನ ಆಂತರ್ಯದ ತಿರುಳನ್ನು ಬಾಳೆಯ ತಿಳಲುವಿನಂತೆ ತಾನೂ ಸವಿದು ಸಹೃದಯರಿಗೂ ನೀಡುವಂತಹುದಾಗಿದೆ. ಆ ಉನ್ನತ ಭಾವ ಕವಿಯ ಪ್ರತಿಭಾಕಿರಣದಲ್ಲಿ ಛಂದಃಪೂರ್ಣವಾಗಿ ಅಲಂಕಾರ ಸಾರದೊಡನೆ ಪ್ರಕಟವಾಗಿದೆ.

- (ಪ್ರಸ್ತಾವನೆಯಿಂದ)



ವಂಶಿ ಪಬ್ಲಿಕೇಷನ್ಸ್
ನೆಲಮಂಗಲ, ಬೆಂಗಳೂರು-562 123
ಮೊಬೈಲ್ : 99165 95916
ಇ-ಮೇಲ್: vamshipublications@gmail.com

